




# ಕರ್ನಾಟಕದ ಶಿಲ್ಪ ಕಲಾವಿದರು






# ಕರ್ನಾಟಕದ ಶಿಲ್ಪ ಕಲಾವಿದರು

ಕರ್ನಾಟಕದ ಶಿಲ್ಪ ಕಲಾವಿದರ ಪರಿಚಯ ಪುಸ್ತಕ

ಪ್ರಧಾನ ಸಂಪಾದಕರು
ಮಹದೇವಪ್ಪ ಎಸ್. ಶಿಲ್ಪಿ

ಸಂಪಾದಕರು
ಡಾ. ಚೂಡಾಮಣಿ ನಂದಗೋಪಾಲ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಕನ್ನಡ ಭವನ, ಮೇಲ್ಮನೆ, ಚಾಲುಕ್ಯ ವಿಭಾಗ, ಜೆ.ಸಿ. ರಸ್ತೆ ಬೆಂಗಳೂರು – ೫೬೦ ೦೦೨
Email: shilpakala.academy@gmail.com
Web: www.karnatakashilpakalaacademy.org
Ph: 080- 22278725

# ಕರ್ನಾಟಕದ ಶಿಲ್ಪ ಕಲಾವಿದರು
ಕರ್ನಾಟಕದ ಶಿಲ್ಪ ಕಲಾವಿದರ ಪರಿಚಯ ಪುಸ್ತಕ

ಮೊದಲ ಮುದ್ರಣ: ೨೦೧೭
ಪ್ರತಿಗಳ ಸಂಖ್ಯೆ: ೧,೦೦೦

ಬೆಲೆ: ರೂ.೩೦೦/-

ಸಂಪಾದಕರು
ಡಾ. ಚೂಡಾಮಣಿ ನಂದಗೋಪಾಲ್

ಪ್ರಕಾಶಕರು:
ಇಂದ್ರಮ್ಮ ಹೆಚ್.ವಿ.
ರಿಜಿಸ್ಟ್ರಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಕನ್ನಡ ಭಾವನ, ಜೆ.ಸಿ.ರಸ್ತೆ
ಬೆಂಗಳೂರು – ೫೬೦ ೦೦೨

## Karnatakada Shilpa Kalavidaru
An Introduction to Sculpture artists of Karnataka

First Print: 2017
No. of Copies: 1,000

**Price: Rs.300/-**

Editor
Dr. Chudamani Nandagopal

Published by
Indramma H.V.,
Registrar,
Karnataka Shilpa Kala Academy
Kannada Bhavan, J.C. Road,
Bengaluru – 560 002

Design: B.S. Vidyaranya
Print: Chaarumathi Prakashana
Chamarajapete, Bengaluru - 18
94482 35553





# ಅಧ್ಯಕ್ಷರ ನುಡಿ



ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಕರ್ನಾಟಕ ಸರ್ಕಾರದ ಆದೇಶದಂತೆ ಕರ್ನಾಟಕ ಲಲಿತಕಲಾ ಅಕಾಡೆಮಿಯಿದ ಪ್ರತ್ಯೇಕವಾಗಿ ೧೯೯೫ರಲ್ಲಿ ಸ್ಥಾಪನೆಯಾಯಿತು. ಅಕಾಡೆಮಿ ಸ್ಥಾಪನೆಗೊಂಡು ಇದುವರೆವಿಗೂ ಕರ್ನಾಟಕದಲ್ಲಿ ಸಾಂಪ್ರದಾಯಿಕ ಶಿಲ್ಪಕಲಾ ಪರಂಪರೆ ಹಾಗೂ ಸಮಕಾಲೀನ ಶಿಲ್ಪ ಪ್ರಕಾರಗಳ ಬೆಳವಣಿಗೆಗಾಗಿ ಶ್ರಮಿಸುತ್ತಿದ್ದು, ನಶಿಸುತ್ತಿರುವ ನಮ್ಮ ಶಿಲ್ಪಕಲಾ ಶೈಲಿಗಳನ್ನೂ ಗುರುತಿಸಿ ಅನೇಕ ಪ್ರಗತಿಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಶಿಲ್ಪಕಲಾ ಬೆಳವಣಿಗೆಗೆ ಕಂಕಣಬದ್ಧವಾಗಿದೆ. ಈ ದಿಸೆಯಲ್ಲಿ ಯುವ ಶಿಲ್ಪಿಗಳನ್ನು ಉತ್ತೇಜಿಸುವ ದೃಷ್ಟಿಯಿಂದ ವಾರ್ಷಿಕ ಶಿಲ್ಪಕಲಾ ಪ್ರದರ್ಶನ, ಶಿಲ್ಪಕಲಾ ವಿಷಯದಲ್ಲಿ ಅಧ್ಯಯನ ಮಾಡುತ್ತಿರುವ ಸಾಮಾನ್ಯ/ಪರಿಶಿಷ್ಟ ಜಾತಿ/ಪಂಗಡದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ, ಹಿರಿಯ ಕಲಾವಿದರನ್ನು ಗೌರವಿಸುವುದು, ವಿವಿಧ ಶಿಲ್ಪಕಲಾ ಪ್ರಕಾರಗಳನ್ನು ಗುರುತಿಸಿ ಸಹಯೋಗದೊಂದಿಗೆ ಶಿಬಿರಗಳ ಯೋಜನೆ ರೂಪಿಸುವುದು, ಸಾಮಾನ್ಯ/ಪರಿಶಿಷ್ಟ ಜಾತಿ/ಪಂಗಡದ ಅಭ್ಯರ್ಥಿಗಳಿಗೆ ಫೆಲೋಷಿಪ್ ಯೋಜನೆ ಶಿಲ್ಪಕಲೆಗೆ-ಶಿಲ್ಪಿಗಳಿಗೆ ಸಂಬಂಧಿಸಿದ ಪುಸ್ತಕ/ಗ್ರಂಥಗಳ ಪ್ರಕಟಣೆ ಕಾರ್ಯಗಳನ್ನು ಅಕಾಡೆಮಿಯು ಕೈಗೊಂಡು ತನ್ನ ಕಾರ್ಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಶಿಲ್ಪಕಲೆ ಬೆಳವಣಿಗೆಗೆ ತನ್ನದೇ ಆದ ಕೊಡುಗೆ ನೀಡುತ್ತಿದೆ. ಇತ್ತೀಚಿನ ದಿನಗಳಲ್ಲಿ ಶಿಲ್ಪಕಲಾವಿದರ ಮಾಹಿತಿಯನ್ನು ಕಲೆಹಾಕುವುದಾಗಲಿ ಅಥವಾ ಅವರ ಬಗ್ಗೆ ತಿಳಿದುಕೊಳ್ಳುವುದು ಬಹಳ ಅಸಾಧ್ಯವಾಗಿದೆ.

ಇಂತಹ ಸ್ಥಿತಿಯನ್ನು ಮನಗಂಡು ಕರ್ನಾಟಕ ರಾಜ್ಯದಲ್ಲಿ ನೆಲೆಸಿರುವ ಶಿಲ್ಪಿಗಳ ಮಾಹಿತಿಯನ್ನು ಸಂಗ್ರಹಿಸಿ ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಬೇಕೆಂಬುದು ಅಕಾಡೆಮಿಯ ಹಿಂದಿನ ಅಧ್ಯಕ್ಷರುಗಳ ಅವಧಿಯಲ್ಲಿ ಕೈಗೊಂಡರೂ ಯೋಜನೆ ಪೂರ್ಣಗೊಳಿಸಲು ಸಾಧ್ಯವಾಗಲಿಲ್ಲ. ಸಧ್ಯದಲ್ಲಿ ಅಕಾಡೆಮಿಯು ಸದಸ್ಯರೊಳಗೊಂಡಂತೆ ಕಲಾವಿದರ ಇತ್ತೀಚಿನ ಮಾಹಿತಿಯನ್ನು ಸಂಗ್ರಹಿಸಿ ಸಂಪೂರ್ಣ ವಿವರವಿರುವ ಶಿಲ್ಪ ಕಲಾವಿದರ ಮಾಹಿತಿ ಪುಸ್ತಕವನ್ನು ಈ ಅವಧಿಯಲ್ಲಿ ಹೊರತರುತ್ತಿದ್ದೇವೆ. ಈ ಪುಸ್ತಕವನ್ನು ಮುದ್ರಿಸಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದರೆ ಇಂತಹ ಪುಸ್ತಕವನ್ನು ಕಲಾಭಿಮಾನಿಗಳು ಬಹಳ ಆತ್ಮೀಯವಾಗಿ ಸ್ವಾಗತಿಸುತ್ತಾರೆ ಎಂಬ ಆಶಾಭಾವ ಮೂಡಿತು. ಇದು ಪ್ರಾಥಮಿಕ ಹಂತವಾಗಿದ್ದು ಮುಂದೆ ಕಾಲಕಾಲಕ್ಕೆ ಇದನ್ನು ಪರಿಷ್ಕರಿಸಬೇಕಾಗುತ್ತದೆ. ಮುಂದಿನ ದಿನಗಳಲ್ಲಿ ಈ ಕೆಲಸ ಮುಂದುವರೆಯುತ್ತದೆ ಎಂಬ ಆಶಾಭಾವನೆ ನನ್ನದು. ಇಂತಹ ಪುಸ್ತಕವನ್ನು ನನ್ನ ಅಧಿಕಾರಾವಧಿಯಲ್ಲಿ ಮುದ್ರಿಸುತ್ತಿರುವುದಕ್ಕೆ ಹೆಮ್ಮೆಯೆನಿಸುತ್ತದೆ. ನನಗೆ ಈ ಪುಸ್ತಕ ಮುದ್ರಿಸಲು ಸಂಪಾದಕರಾಗಿ ಕಾರ್ಯನಿರ್ವಹಿಸಿದ ಡಾ.ಚೂಡಾಮಣಿ ನಂದಗೋಪಾಲ್ ಅವರಿಗೆ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಅದೇ ರೀತಿ ಈ ಪುಸ್ತಕದ ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ, ಅಕಾಡೆಮಿಯ ರಿಜಿಸ್ಟ್ರಾರ್ ಆದ ಶ್ರೀಮತಿ ಇಂದ್ರಮ್ಮ ಹೆಚ್.ವಿ. ಅವರಿಗೂ ಅಕಾಡೆಮಿಯ ಸಿಬ್ಬಂದಿಗಳಿಗೂ, ಈ ಪುಸ್ತಕವನ್ನು ಅಂದವಾಗಿ ಮುದ್ರಣ ಮಾಡುತ್ತಿರುವ ಮಾಲೀಕರು, ಚಾರುಮತಿ ಪ್ರಕಾಶನ, ಬೆಂಗಳೂರು ಇವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**-ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

## ಪ್ರಕಾಶಕರ ನುಡಿ



ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಕರ್ನಾಟಕ ಸರ್ಕಾರದ ಆದೇಶದಂತೆ ಕರ್ನಾಟಕ ಲಲಿತಕಲಾ ಅಕಾಡೆಮಿಯಿದ ಪ್ರತ್ಯೇಕವಾಗಿ ೧೯೯೫ರಲ್ಲಿ ಸ್ಥಾಪನೆಯಾಯಿತು. ಅಕಾಡೆಮಿ ಸ್ಥಾಪನೆಗೊಂಡು ಇದುವರೆವಿಗೂ ಕರ್ನಾಟಕದಲ್ಲಿ ಸಾಂಪ್ರದಾಯಿಕ ಶಿಲ್ಪಕಲಾ ಪರಂಪರೆ ಹಾಗೂ ಸಮಕಾಲೀನ ಶಿಲ್ಪ ಪ್ರಕಾರಗಳ ಬೆಳವಣಿಗೆಗಾಗಿ ಶ್ರಮಿಸುತ್ತಿದ್ದು, ನಶಿಸುತ್ತಿರುವ ನಮ್ಮ ಶಿಲ್ಪಕಲಾ ಶೈಲಿಗಳನ್ನೂ ಗುರುತಿಸಿ ಅನೇಕ ಪ್ರಗತಿಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಶಿಲ್ಪಕಲಾ ಬೆಳವಣಿಗೆಗೆ ಕಂಕಣಬದ್ಧವಾಗಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಉತ್ತುಂಗವಾಗುತ್ತಿದೆ. ಕಳೆದ ಎರಡು ದಶಕಗಳಿಂದ ಅಕಾಡೆಮಿಯಲ್ಲಿ ಶಿಲ್ಪಕಲಾವಿದರ ಮಾಹಿತಿ ನೋಡಬಯಸಿದರೆ ಸಿಗುವುದಿಲ್ಲ. ಅಕಾಡೆಮಿಗೆ ಸಾರ್ವಜನಿಕರು ಬಂದು ಶಿಲ್ಪಕಲಾವಿದರ ಮಾಹಿತಿ ಕೇಳಿದರೂ ಬೆರಳೆಣಿಕೆಯ ಕಲಾವಿದರ ವಿವರ ಲಭ್ಯವಾಗುತ್ತಿತ್ತು. ಇದನ್ನು ಮನಗಂಡು ಅಕಾಡೆಮಿಯ ಸಭೆಯಲ್ಲಿ ಪ್ರಸ್ತಾಪಿಸಿದಾಗ ಇದನ್ನು ಅಗತ್ಯವಾಗಿ ಅತ್ಯಂತ ತುರ್ತಾಗಿ ಮುದ್ರಿಸಿಬೇಕೆಂಬುದು ಎಲ್ಲರ ಅಭಿಪ್ರಾಯವಾಗಿತ್ತು. ನಂತರದಲ್ಲಿ ಇದಕ್ಕೆ ಸಭೆಯು ಸದರಿ ಪುಸ್ತಕ ಹೊರತರಲು ಸೂಕ್ತ ಸಂಪಾದಕರಾಗಿ ಡಾ.ಚೂಡಾಮಣಿ ನಂದಗೋಪಾಲ್ ಅವರನ್ನು ನೇಮಕ ಮಾಡಿದರು. ಅವರೂ ಸಹ ಈ ಪುಸ್ತಕ ಹೊರತರಲು ಸಾಕಷ್ಟು ಶ್ರಮವಹಿಸಿರುತ್ತಾರೆ. ಅವರಿಗೆ ಅಕಾಡೆಮಿಯ ಪರವಾಗಿ ಧ್ಯನವಾದಗಳನ್ನು ಅರ್ಪಿಸುತ್ತೇನೆ.

ಅಕಾಡೆಮಿಯಿಂದ ಗೌರವ ಪ್ರಶಸ್ತಿ ಪುರಸ್ಕೃತರು, ಸರ್ಕಾರದ ಕೊಡಮಾಡುವ ರಾಜ್ಯ ಪ್ರಶಸ್ತಿ ಹಾಗೂ ಜಕಣಾಚಾರಿ ಪ್ರಶಸ್ತಿ ಪಡೆದ ಶಿಲ್ಪಕಲಾವಿದರ ಕಿರು ಹೊತ್ತಿಗೆ ಅಕಾಡೆಮಿಯಿಂದ, ಇಲಾಖೆಯಿಂದ ಮಾಡಲಾಗಿದ್ದು, ಮುಂದಿನ ದಿನಗಳಲ್ಲಿ ಅಕಾಡೆಮಿಯಿಂದ ಈರ್ವರ ಕಲಾವಿದರ ಪುಸ್ತಕ ಹೊರತರುವ ಯೋಜನೆ ಹಮ್ಮಿಕೊಳ್ಳಲು ಉದ್ದೇಶಿಸಿದೆ. ಸದರಿ ಪುಸ್ತಕದಲ್ಲಿ ಅಕಾಡೆಮಿಯ ಸದಸ್ಯರು ಕ್ರೋಢಿಕರಿಸಿ ನೀಡಿದ ಮಾಹಿತಿ ಅನ್ವಯ ಸಂಪೂರ್ಣ ಮಾಹಿತಿ ಇರುವ ಕಲಾವಿದರ ಮಾಹಿತಿಯನ್ನು ಮಾತ್ರವೇ ಮುದ್ರಿಸಲಾಗಿದೆ. ನಂತರದಲ್ಲಿ ಉಳಿದ ಕಲಾವಿದರ ಮಾಹಿತಿ ಕಲೆಹಾಕಿ ಅದನ್ನು ಪರಿಷ್ಕರಿಸಿ ಮುಂದಿನ ದಿನಗಳಲ್ಲಿ ಮುದ್ರಿಸಲಾಗುವುದು. ಕಲಾಸಕ್ತರು ಸದರಿ ಪುಸ್ತಕವನ್ನು ಮುದ್ರಿಸಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದರೆ ಇಂತಹ ಪುಸ್ತಕವನ್ನು ಕಲಾಭಿಮಾನಿಗಳು ಬಹಳ ಆತ್ಮೀಯವಾಗಿ ಸ್ವಾಗತಿಸುತ್ತಾರೆ ಎಂಬ ಆಶಾಭಾವ ಮೂಡಿತು. ಈ ಪುಸ್ತಕದ ಸಂಪಾದಕರಾಗಿರುವ ಡಾ.ಚೂಡಾಮಣಿ ನಂದಗೋಪಾಲ್ ಅವರಿಗೆ ಮತ್ತೊಮ್ಮೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಅದೇ ರೀತಿ ಈ ಪುಸ್ತಕದ ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ ಅವರಿಗೂ, ಅಕಾಡೆಮಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ, ಅಕಾಡೆಮಿಯ ಸಿಬ್ಬಂದಿಗಳಿಗೂ, ಈ ಪುಸ್ತಕವನ್ನು ಅಂದವಾಗಿ ಮುದ್ರಣ ಮಾಡುತ್ತಿರುವ ಮಾಲೀಕರು, ಚಾರುಮತಿ ಪ್ರಕಾಶನ, ಬೆಂಗಳೂರು ಇವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**– ಇಂದ್ರಮ್ಮ ಹೆಚ್.ವಿ.**
ರಿಜಿಸ್ಟ್ರಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ





## ಸಂಪಾದಕರ ನುಡಿ



'ಶಿಲ್ಪ' ಎಂಬ ಪದವು 'ಸೃಜಿಸು' ಎಂಬ ಅರ್ಥವನ್ನು ಕೊಡುತ್ತದೆ. ಅಂದರೆ ಶಿಲ್ಪವು ಸೃಜನಾತ್ಮಕಕ್ರಿಯೆ. ಸೃಜನಶೀಲತೆಯೇ ಶಿಲ್ಪಕಲೆಯ ಜೀವಾಳ. ಹೀಗಾಗಿ ಶಿಲ್ಪ ರಚನಾಕ್ರಮವು ಭಾರತೀಯ ಸಂಸ್ಕೃತಿಯ ಕೈಗನ್ನಡಿಯಾಗಿ ನಿರಂತರವಾಗಿ ಕಾಲದಿಂದ ಕಾಲಕ್ಕೆ ಸಾಗಿ ಬರುತ್ತಲಿದೆ. ವೈಜ್ಞಾನಿಕ ನೆಲೆಯನ್ನು ಪಡೆದ ಶಿಲ್ಪರಚನಾಕ್ರಮವು ಶಾಸ್ತ್ರ ಮತ್ತು ಪ್ರಯೋಗಗಳ ಆಧಾರದ ಮೇಲೆ ರೂಪುಗೊಂಡು ಶಿಲ್ಪಿಯ ಅಥವಾ ರೂವಾರಿಯ ಕೈಯಲ್ಲಿ ಕಲೆಯಾಗಿ ಅರಳಿದೆ. ಶಿಲ್ಪಕಲೆಯು ಕಲಾ ಇತಿಹಾಸದ ಸೃಷ್ಟಿಯಿಂದ ಒಂದು ಅಗ್ರ ಸಾಧನೆಯ ರೂಪದಲ್ಲಿ ವಿಕಸಿತಗೊಂಡಿದೆ. ಭಾರತೀಯ ಕಲಾಪರಂಪರೆಗೆ ವಾಸ್ತುಶಿಲ್ಪದೊಂದಿಗೆ ಸೇರ್ಪಡೆಯಾಗಿ ಬೆಳೆದು ಬಂದಿರುವ ಶಿಲ್ಪಕಲೆಯು ಮೈಲಿಗಲ್ಲಿನ ರೂಪದಲ್ಲಿದ್ದು ಆಯಾ ಕಾಲದ ಜನಜೀವನವನ್ನು ತೆರೆದಿಡುವ ಸಾಧನವಾಗಿದೆ. ಹಾಗೂ ಶಿಲ್ಪಕಲಾ ರಚನೆಗಳು ಐತಿಹಾಸಿಕ ಮಾಹಿತಿಯನ್ನು ನೀಡುವ ದಾಖಲೆಗಳಾಗಿ ಇತಿಹಾಸ ರಚನಾಕ್ರಮಕ್ಕೆ ಪುಷ್ಟಿ ನೀಡುತ್ತವೆ.

ಶಿಲ್ಪಿ, ರೂವಾರಿಯ ಬೆಸ (ಕಾರ್ಯ) ವಿಶಿಷ್ಟ ರೂಪದ್ದು. ಶಿಲ್ಪಿಯು ಯಾವುದೇ ಮೂರ್ತಿಯನ್ನು ಕೃತಿಯ ರೂಪದಲ್ಲಿ ತರುವಾಗ ತನ್ನ ಗುರುಪರಂಪರೆಯನ್ನು ಅನುಸರಿಸಬೇಕಾಗುತ್ತದೆ. ಅದರೊಂದಿಗೆ ಪರಂಪರಾನುಗತವಾಗಿ ಬಂದಿರುವ ಕೈಪಿಡಿ ಮತ್ತು ರಚನಾಕ್ರಮಗಳನ್ನು ಎದುರಿಗೆ ಇಟ್ಟುಕೊಳ್ಳಬೇಕಾಗುತ್ತದೆ. ಲೋಹ, ಮಣ್ಣು, ಶಿಲೆ, ಮರ, ಇಂದಿನ ಕೆಲವು ಮಾಧ್ಯಮಗಳನ್ನು ಬಳಸಿಕೊಂಡು ಆಕಾರ ಕೊಡಲು ತೊಡಗಬೇಕಾಗುತ್ತದೆ. ಆಗ ಅನೇಕ ವಿಷಯಗಳನ್ನು ಸಾಂಕೇತಿಕ ರೂಪದಲ್ಲಿ ತೊಡಗಿಸಿಕೊಳ್ಳಬೇಕಾಗುತ್ತದೆ. ತಾನು ಕೊಡುವ ಆಕಾರಕ್ಕೆ ಒಂದು ನಿರ್ದಿಷ್ಟ ಅರ್ಥ, ಚೆಲುವು, ಭಾವ, ನಿಲುವು ಮತ್ತು ಸೊಬಗನ್ನು ತಾಂತ್ರಿಕ ಲಕ್ಷಣಗಳನ್ನು ಅನುವಾಗಿಸಿಕೊಂಡು ಸೇರಿಸುವುದು ಸುಲಭಸಾಧ್ಯವಲ್ಲ. ವೈಯಕ್ತಿಕ ಗುಣಧರ್ಮಗಳನ್ನು ಮೀರಿ ಅಲೌಕಿಕ ಅನುಭವವನ್ನು ಹೊರಸೂಸುವುದೆಂದರೆ ಶಿಲ್ಪಿಗೆ ಒಂದು ಸವಾಲೇ ಸರಿ.

ಈ ಎಲ್ಲಾ ವಿಶಿಷ್ಟ ರೀತಿನೀತಿಗಳು ಸಾಂಪ್ರದಾಯಿಕ ಶಿಲ್ಪಿಗಳಿಗೂ, ಸಮಕಾಲೀನ ಶಿಲ್ಪಿಗಳಿಗೂ ಅನ್ವಯಿಸುತ್ತವೆ. ಸಾಂಪ್ರದಾಯಿಕ ಶಿಲ್ಪಿಗಳಿಗೆ ಖಚಿತವಾದ ಒಂದು ಚೌಕಟ್ಟು, ವಿಗ್ರಹಶಾಸ್ತ್ರದ ಆಳವಾದ ಅಧ್ಯಯನ, ಅಭ್ಯಾಸದ ಅಗತ್ಯತೆ ಇದೆ. ಸಮಕಾಲೀನ ಶಿಲ್ಪಿಗಳಿಗೆ ಹೊಸ ಪರಿಕಲ್ಪನೆಗಳನ್ನು ಆಯಾ ಮಾಧ್ಯಮಕ್ಕೆ ಅಳವಡಿಸಿ ಸೃಜನಶೀಲತೆಯನ್ನು ಮೆರೆಯುವ ಅವಕಾಶವಿರುತ್ತದೆ. ಇದರೊಂದಿಗೆ ಭಾರತೀಯ ಜಾನಪದ ಶಿಲ್ಪ ಪರಂಪರೆಯು ಸ್ವಾಭಾವಿಕತೆ, ಪರಿಸರ ಪ್ರಜ್ಞೆ ಮತ್ತು ಸಹಜ ಗುಣಧರ್ಮ ಪ್ರತಿಪಾದನೆಗೆ ಒತ್ತುಕೊಟ್ಟು ಜನಮನವನ್ನು ಗೆಲ್ಲುತ್ತದೆ. ಈ ರೀತಿ ಭಾರತೀಯ ಶಿಲ್ಪಕಲಾ ಬೆಳವಣಿಗೆಯಲ್ಲಿ ವೈಶಿಷ್ಟ್ಯಪೂರ್ಣವಾಗಿ ಬೆಳೆದುಬಂದ ಕರ್ನಾಟಕ ಶಿಲ್ಪಕಲಾ ಪರಂಪರೆಯ ವಾಹಿನಿಯನ್ನು ಇಂದಿಗೂ ಶಿಲ್ಪಿಗಳು ಬೆಳೆಸಿಕೊಂಡು ಬರುತ್ತಿರುವುದು ನಮಗೆ ಕಾಣಸಿಗುತ್ತದೆ.

ಕರ್ನಾಟಕ ಸರ್ಕಾರದ ಅಂಗವಾದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯನ್ನು ಸ್ಥಾಪಿಸಿ ಶಿಲ್ಪಕಲೆಯ ಬೆಳವಣಿಗೆಗೆ ಪ್ರತ್ಯೇಕ ಸ್ಥಾನಮಾನ ಸಿಗುವ ನಿಟ್ಟಿನಲ್ಲಿ ಮಾಡಿರುವ ಪ್ರಯತ್ನಗಳು ಶ್ಲಾಘನೀಯ. ಶಿಲ್ಪಕಲಾ ಅಕಾಡೆಮಿಯ ಮೂಲಕ ಕರ್ನಾಟಕದ ಶಿಲ್ಪಕಲಾವಿದರನ್ನು ಗುರುತಿಸಿ ಮಾನ್ಯತೆ ನೀಡಲಾಗುತ್ತಿದೆ. ಈ ಕ್ಷೇತ್ರದಲ್ಲಿ ದುಡಿದಂತಹ ಹಿರಿಯ ಶಿಲ್ಪಿಗಳನ್ನು ಅಕಾಡೆಮಿಗೆ ನೇಮಕ ಮಾಡುತ್ತಿರುವುದರಿಂದ ಅವರುಗಳು ಈ ಕ್ಷೇತ್ರವನ್ನು ಶ್ರೀಮಂತಗೊಳಿಸುತ್ತಿದ್ದಾರೆ.



ಪಾರಂಪರಿಕ, ನವ್ಯ, ಸಮಕಾಲೀನ ಹಾಗೂ ಜನಪದ ರಚನಾಕ್ರಮವನ್ನು ನಾಡಿನ ಶಿಲ್ಪಿಗಳು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಉತ್ತಮ ಶಿಲ್ಪಕಲಾ ಪ್ರದರ್ಶನಗಳು, ಮಾಧ್ಯಮ ಮತ್ತು ವಿಷಯಾಧಾರಿತ ಶಿಬಿರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಅಕಾಡೆಮಿಯು ಆಯೋಜಿಸುತ್ತಿರುವುದರಿಂದ ಶಿಲ್ಪಿಗಳು ಹೊಸ ಪ್ರಯೋಗಗಳ ಅನುಭವ ಪಡೆಯಲು ಸಾಧ್ಯವಾಗುತ್ತಿದೆ. ಶಿಲ್ಪಕಲೆಗೆ ಸಂಬಂಧಪಟ್ಟಂತೆ ಅನೇಕ ಪ್ರಕಟಣೆಗಳು ಹೊರಬರುತ್ತಿರುವುದರಿಂದ ಹೊಸ ಪೀಳಿಗೆಯ ಕಲಾವಿದರಿಗೆ, ಶಿಲ್ಪಕಲೆಯಲ್ಲಿ ಆಸಕ್ತಿಯಿರುವವರಿಗೆ ಜ್ಞಾನಾರ್ಜನೆಗೆ ಅಕಾಡೆಮಿ ಅವಕಾಶ ಮಾಡಿಕೊಟ್ಟಿದೆ. ಅದರಂತೆ ಇತ್ತೀಚೆಗಿನ ಫೆಲೋಶಿಪ್ ಯೋಜನೆಯು ಶಿಲ್ಪಕಲಾ ಕ್ಷೇತ್ರದಲ್ಲಿ ವಿಷಯಾಧಾರಿತ ಸಂಶೋಧನೆಗೆ ಪ್ರೋತ್ಸಾಹ ನೀಡುವ ಒಂದು ಸಕ್ರಿಯ ಯೋಜನೆಯಾಗಿದೆ.

ಇಷ್ಟೆಲ್ಲಾ ರಚನಾತ್ಮಕ ಕಾರ್ಯಗಳು ಶಿಲ್ಪಕಲಾ ಅಕಾಡೆಮಿಯ ಮೂಲಕ ನಡೆಯುತ್ತಿದ್ದರೂ ಶಿಲ್ಪಿಗಳ ಬಗ್ಗೆ ಪರಿಚಯ ನೀಡುವಂತಹ ಒಂದು ಪ್ರತ್ಯೇಕ ಕೈಪಿಡಿಯ ಕೊರತೆ ಇತ್ತು. ಅದನ್ನು ನೀಗಿಸಲು ಇಂದಿನ ಅಧ್ಯಕ್ಷರಾದ ಹಿರಿಯ ಶಿಲ್ಪಿ ಮಾನ್ಯ ಶ್ರೀ ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿಗಳ ನೇತೃತ್ವದಲ್ಲಿ, ಅಕಾಡೆಮಿಯ ಸಕ್ರಿಯ ರಿಜಿಸ್ಟ್ರಾರ್ ಶ್ರೀಮತಿ ಇಂದಿರಮ್ಮ ಎಚ್.ವಿ. ಅವರು ಆಸಕ್ತಿ ವಹಿಸಿ ಕೈಪಿಡಿಯನ್ನು ತಯಾರಿಸುವ ಕಾರ್ಯವನ್ನು ನನಗೆ ಒಪ್ಪಿಸಿದರು. ಇದು ಶಿಲ್ಪ ಕಲಾವಿದರ ವೈಯಕ್ತಿಕ ಮಾಹಿತಿಯನ್ನು ನೀಡುವ ಕಿರಿದಾದ ಒಂದು ಕೈಪಿಡಿ ಮಾತ್ರ. ಕರ್ನಾಟಕದ ಹಿರಿಯ ಶಿಲ್ಪಿಗಳಿಂದ ಹಿಡಿದು ಉದಯೋನ್ಮುಖ ಶಿಲ್ಪಕಲಾವಿದರವರೆಗೂ ಸುಮಾರು ೧೫೦ ಶಿಲ್ಪಕಲಾವಿದರ ಸಂಕ್ಷಿಪ್ತ ಮಾಹಿತಿ ಇಲ್ಲಿದೆ. ಈ ಕಾರ್ಯವನ್ನು ನನಗೆ ವಹಿಸಿದ್ದಕ್ಕೆ ಅಧ್ಯಕ್ಷರಿಗೂ ಮತ್ತು ರಿಜಿಸ್ಟ್ರಾರ್ ಇಂದಿರಮ್ಮನವರಿಗೂ ಈ ಮೂಲಕ ವಂದನೆಗಳನ್ನು ತಿಳಿಸಬಯಸುತ್ತೇನೆ. ಈ ಕೈಪಿಡಿಯನ್ನು ತಯಾರಿಸಲು ಹೆಚ್ಚಿನ ಸಹಾಯವನ್ನು ನೀಡಿದ ನಮ್ಮ ಜೈನ್ ವಿಶ್ವವಿದ್ಯಾಲಯದ ಪಿ.ಎಚ್.ಡಿ. ಸಂಶೋಧನಾರ್ಥಿಗಳಾದ ಶ್ರೀಮತಿ ಅರುಣಾ ಕೆ.ಆರ್. ಮತ್ತು ಶ್ರೀಮತಿ ಅನಿತಾ ವಿಶ್ವನಾಥ್ ಹಾಗೂ ಕಲಾಸಂಶೋಧಕಿ ಡಾ. ಸೌಮ್ಯ ಮಂಜುನಾಥ ಚವ್ಹಾಣರು ಅಭಿನಂದನಾರ್ಹರು.

**– ಡಾ. ಚೂಡಾಮಣಿ ನಂದಗೋಪಾಲ್**

ಕಲಾಇತಿಹಾಸ ತಜ್ಞರು,
ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ
ಗೌರವ ಸಂಪನ್ಮೂಲ ವ್ಯಕ್ತಿ





## ಅಣ್ಣಯ್ಯಾಚಾರ್ ಹೆಚ್.ಕೆ.

ಹನಗನಹಳ್ಳಿ, ಡಿ.ಜಿ. ಹಳ್ಳಿ ಅಂಚೆ
ಬಸರಾಳು ಹೋಬಳಿ
ಮಂಡ್ಯ ತಾ ಮತ್ತು ಜಿಲ್ಲೆ
ದೂರವಾಣಿ: 94486 42493



**ಜನನ:** 10-08-1975

**ಶಿಕ್ಷಣ:** ಬಿ.ಎಫ್.ಎ. ಪದವಿ

**ಶಿಲ್ಪಕಲಾ ಮಾಧ್ಯಮ:** ಬಹುಮಾಧ್ಯಮ

**ಪ್ರಮುಖ ಕೃತಿಗಳು:** ಕಲ್ಲಿನಲ್ಲಿ ಲಕ್ಷ್ಮಿ, ಸರಸ್ವತಿ, ಶನೇಶ್ವರ, ಶಿವಲಿಂಗ, ನಂದಿ, ಭೈರವ ನವಗ್ರಹ ವಿಗ್ರಹಗಳು ಇತ್ಯಾದಿ. ಸಿಮೆಂಟ್‌ನಲ್ಲಿ ಚಾಮುಂಡೇಶ್ವರಿ, ಶಿವ, ಮಾಯಮ್ಮ ದೇವಿ ಇತ್ಯಾದಿ

**ಪ್ರಶಸ್ತಿ / ಬಹುಮಾನಗಳು:** ದಸರಾ ವಸ್ತುಪ್ರದರ್ಶನ ಬಹುಮಾನ, ತಾಲ್ಲೂಕು ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ, ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವಾರ್ಷಿಕ ಬಹುಮಾನ-2014

ನಾಡಿನ ವಿವಿಧ ಭಾಗಗಳಲ್ಲಿ ನಡೆದ ಅನೇಕ ಕಲಾ ಶಿಬಿರಗಳಲ್ಲಿ ಭಾಗವಹಿಸಿದ ಅನುಭವ.



## ಅರವಿಂದ

S/o ವೀರಭದ್ರಪ್ಪ ಬಡಿಗೇರ
ಸಂತೆ ಬಜಾರ್, ಹಟ್ಟಿ
ತಾ। ಲಿಂಗಸೂಗೂರ
ಜಿ। ರಾಯಚೂರು.
ದೂರವಾಣಿ: 9902814922



**ಜನನ:** 05-03-1957

**ಶಿಕ್ಷಣ:** ಏಳನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಕಾಷ್ಠ

**ಪ್ರಮುಖ ಕೃತಿಗಳು:** ರಥಗಳು, ಗ್ರಾಮದೇವತೆ, ಪಲ್ಲಕ್ಕಿ, ತಲಬಾಗಿಲು, ಕುದುರೆ-ಹಟ್ಟಿ, ಹಟ್ಟಿಲಿಂಗಾವುದೂತ ರಥಗಳು- ಹೊಂದಲಿ (ಆಂಜನೇಯ), ಅಮರೇಶ್ವರ, ತಿಮ್ಮಾಪುರ, ಕಲ್ಮಲ್ಲಿ, ಬೊಳಮಾನದೊಡ್ಡಿ (ವೆಂಕಟೇಶ್ವರ).

**ಪ್ರಶಸ್ತಿ/ಬಹುಮಾನಗಳು:** ಶ್ರೀ ಸಿದ್ದರಾಮೇಶ್ವರ ಮಠ ಸುಕ್ಷೇತ್ರ ಹೀರಾ ಸನ್ಮಾನ-2014, ಶ್ರೀ ಬಸವೇಶ್ವರ ದೇವಸ್ಥಾನ ಟ್ರಸ್ಟ್ ಸನ್ಮಾನ-1995



## ಅರುಣ್ ವೈ.

ನಂ.9, ಚಾಮರಾಜರಸ್ತ
ಮೈಸೂರು
ದೂರವಾಣಿ: 98861 43188



**ಜನನ:** 15–12–1983

**ಶಿಕ್ಷಣ:** ಎಂ.ಬಿ.ಎ.

**ಪ್ರಮುಖ ಕೃತಿಗಳು:** 14 ಅಡಿ ಎತ್ತರದ ಬಿಳಿಕಲ್ಲಿನ, ಜಯಚಾಮರಾಜೇಂದ್ರ ಒಡೆಯರ ವಿಗ್ರಹ– ಮೈಸೂರಿನ ಹಾರ್ಡಿಂಜ್ ವೃತ್ತದಲ್ಲಿ. ಮೈಸೂರು ವಿಶ್ವವಿದ್ಯಾಲಯದಲ್ಲಿ ಆಧುನಿಕ ಶಿಲ್ಪಕಲಾಕೃತಿ, 6 ಅಡಿ ಎತ್ತರದ ಗರುಡ ವಿಗ್ರಹ, ಕೆಆರ್‌ಎಸ್‌ನ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿ, ಯೋಗಾನರಸಿಂಹ, ಮಹೇಶ್ವರಿ, ಸರ್ ಎಂ. ವಿಶ್ವೇಶ್ವರಯ್ಯ, ಡಾ. ಬಿ.ಆರ್. ಅಂಬೇಡ್ಕರ್, ಪಂಚಮುಖಿ ಗಣಪತಿ, ಬುದ್ಧ, ನಂದಿ, ಬಾಲಗಂಗಾಧರ ಇತ್ಯಾದಿ.

**ಪ್ರಶಸ್ತಿ/ಬಹುಮಾನಗಳು:** ಭಾರತ ಸರ್ಕಾರದ 'ದಕ್ಷಿಣ ವಲಯ ಪ್ರತಿಭಾವಂತ ಕಲಾವಿದ' ಪ್ರಶಸ್ತಿ, ಮೈಸೂರು ಜಿಲ್ಲಾಡಳಿತದ 'ರಾಜ್ಯೋತ್ಸವ ಪ್ರಶಸ್ತಿ', ಮೈಸೂರಿನ ರಾಜಮನೆತನ ಮತ್ತು ಮೈಸೂರು ವಿಶ್ವವಿದ್ಯಾಲಯಗಳಿಂದ ಸನ್ಮಾನ.

ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಕೋಫಿ ಅನ್ನಾನ್, ಇವರ ಶಿಲ್ಪಕಲಾ ಕೇಂದ್ರಕ್ಕೆ ಭೇಟಿ ನೀಡಿ ಮೆಚ್ಚುಗೆ ವ್ಯಕ್ತಪಡಿಸಿದ್ದರು.



## ಅರುಣ್‌ಕುಮಾರ್

ಇಂದಿರಾನಗರ, ಬಿಳಗುಲ ಗ್ರಾಮ
ಹೆಸಗಲ್ ಅಂಚೆ, ಮೂಡಿಗೆರೆ ತಾಲ್ಲೂಕು
ಚಿಕ್ಕಮಗಳೂರು ಜಿಲ್ಲೆ – 577 132
ದೂರವಾಣಿ: 97432 18936



**ಜನನ:** 1–06–1987

**ಶಿಕ್ಷಣ:** ಬಿ.ವಿ.ಎ., ಎಂ.ಎಫ್.ಎ.

**ಶಿಲ್ಪಕಲಾ ಮಾಧ್ಯಮ:** ಮಿಶ್ರ ಮಾಧ್ಯಮ

**ಪ್ರಮುಖ ಕೃತಿಗಳು:** ವಿವಿಧ ರೀತಿಯ ಸಮಕಾಲೀನ ಕೃತಿಗಳ ನಿರ್ಮಾಣ ಮತ್ತು ಪ್ರದರ್ಶನಗಳು.

**ಪ್ರಶಸ್ತಿ/ಬಹುಮಾನಗಳು:** ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ 2014ರ ಶಿಲ್ಪಕಲಾ ಪ್ರದರ್ಶನದ ಬಹುಮಾನ.



## ಅಲ್ಲಿಸಾಬ ಸೈದುಸಾಬ ನದಾಫ (ಪಿಂಜಾರ)

ಶ್ರೀ ಸಿದ್ಧಾರೂಢ ಶಿಲ್ಪಕಲಾ ಕೇಂದ್ರ
ಬೀಳಗಿ ಕ್ರಾಸ್, ಬೀಳಗಿ ತಾಲ್ಲೂಕು
ಬಾಗಲಕೋಟೆ ಜಿಲ್ಲೆ – 587 116

ದೂರವಾಣಿ: 99014 68097



**ಜನನ:** 1–06–1946

**ಶಿಕ್ಷಣ:** 3ನೇ ತರಗತಿ

**ಗುರುಗಳು:** ಶ್ರೀ ಮಲ್ಲೋಜಿ ಮಾಯಾಚಾರ್ಯ

**ಮಾಧ್ಯಮ:** ಕಲ್ಲು

**ರಚಿಸಿರುವ ಪ್ರಮುಖ ಕೃತಿಗಳು:** ನಾಗಲಿಂಗೇಶ್ವರ ಮಠ– ಯಡಹಳ್ಳಿ, ದುರ್ಗಾ ದೇವಾಲಯ– ಬೀಳಗಿ, ಸಿದ್ಧಾರೂಢಮಠ ಮಹಾದ್ವಾರ– ಹುಬ್ಬಳ್ಳಿ, ಮಾರುತಿ ದೇವಾಲಯ– ಜಂಬಗಿ, ಶ್ರೀಶೈಲ ಕೈಲಾಸ ಬಾಗಿಲು– ಕರ್ನೂಲು ಇತ್ಯಾದಿ

**ಪ್ರಶಸ್ತಿ/ಬಹುಮಾನಗಳು:** ಬಸವಭೂಷಣ ರಾಜ್ಯಪ್ರಶಸ್ತಿ, ಕಾಯಕ ಯೋಗಿ ಪ್ರಶಸ್ತಿ, ಬಸವರತ್ನ ರಾಷ್ಟ್ರೀಯ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (2013).

ವಿಜಯಕರ್ನಾಟಕ, ಕನ್ನಡಪ್ರಭ, ವಿಜಯವಾಣಿ, ಪ್ರಜಾವಾಣಿ ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾಗಿವೆ. ಇವರ ಬಗ್ಗೆ ಕನ್ನಡ ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ಕಿರುಪ್ರಬಂಧ ಮಂಡಿಸಲಾಗಿದೆ.



## ಅಶೋಕ ಎಸ್.

ಜಡೇರಹಳ್ಳಿ, ಹಿರೇಕಟ್ಟಿಗೇನಹಳ್ಳಿ ಅಂಚೆ,
ಚಿಂತಾಮಣಿ ತಾಲ್ಲೂಕು,
ಚಿಕ್ಕಬಳ್ಳಾಪುರ ಜಿಲ್ಲೆ – 583 128

ದೂರವಾಣಿ: 96116 76422



**ಜನನ:** 20–9–1988

**ಶಿಕ್ಷಣ:** ಎಂ.ಎಫ್.ಎ. ಪದವಿ

**ಶಿಲ್ಪಕಲಾ ಮಾಧ್ಯಮ:** ಮಿಶ್ರ

**ಪ್ರಮುಖ ಕೃತಿಗಳು:** ವಿವಿಧ ರೀತಿಯ ಸಮಕಾಲೀನ ಶಿಲ್ಪಗಳು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು 12ನೇ ವಾರ್ಷಿಕ ಶಿಲ್ಪಕಲಾ ಪ್ರದರ್ಶನದಲ್ಲಿ ಸಮಕಾಲೀನ ಪ್ರಕಾರದಲ್ಲಿ ಬಹುಮಾನ ಮತ್ತು ನಾಡಿನ ವಿವಿಧ ಕಡೆಗಳಲ್ಲಿ ಕೃತಿಗಳ ಪ್ರದರ್ಶನ ಮತ್ತು ಬಹುಮಾನಗಳು ಲಭ್ಯವಾಗಿವೆ.



## ಆಂಜನೇಯ ಎ. ವಡ್ಡರ್

ಕೆ.ಪಿ.ಟಿ.ಸಿ.ಎಲ್. ಬಳಿ, ಶೇಜವಾಡ
ಕಾರವಾರ
ಉತ್ತರ ಕನ್ನಡ ಜಿಲ್ಲೆ – 587204
ದೂರವಾಣಿ: 92593 40499



**ಜನನ:** 10–06–1982

**ಶಿಕ್ಷಣ:** 5ನೇ ತರಗತಿ, 18 ವರ್ಷಗಳ ಕಾಲ ಸಿಮೆಂಟ್ ಶಿಲ್ಪದಲ್ಲಿ ಕೆಲಸ ಮಾಡಿದ ಅನುಭವ.

**ಪ್ರಮುಖ ಕೃತಿಗಳು:** ಕಾರವಾರದಲ್ಲಿ ವಿವಿಧ ದೇವಾಲಯಗಳ ಗೋಪುರ ನಿರ್ಮಾಣ. ಕಾರವಾರದ ಸಿಮೆಂಟ್ ಶಿಲ್ಪ ಕಾರ್ಯಾಗಾರದಲ್ಲಿ ಹಿರಿಯ ಶಿಲ್ಪಿಯಾಗಿ ಭಾಗವಹಿಸಿದ್ದಾರೆ.



## ಈರಣ್ಣ ಗುರುಬಸಪ್ಪ ವಿಶ್ವಕರ್ಮ

ಸಾ। ಕೊನಾಳ, ತಾ। ಸುರಪುರ,
ಜಿ। ಯಾದಗಿರಿ–585290
ದೂರವಾಣಿ: 9845415714



**ಜನನ:** 07–07–1962

**ಶಿಕ್ಷಣ:** ಎಸ್.ಎಸ್.ಎಲ್.ಸಿ.

**ಶಿಲ್ಪಕಲಾ ಮಾಧ್ಯಮ:** ಕಾಷ್ಠ

**ಗುರುಗಳು:** ಶ್ರೀ ಗುರುಬಸಪ್ಪ ವಿಶ್ವಕರ್ಮ

**ಪ್ರಮುಖ ಪ್ರದರ್ಶನಗಳು:** ಕಲಬುರ್ಗಿ ಕಂಪು–2010

**ಪ್ರಮುಖ ಕೃತಿಗಳು:** ತಲಬಾಗಿಲು, ಕುದುರೆಗಳು, ಪಡಸಾಲೆಗಳು, ಚಕೋರ ಪಕ್ಷಿ, ಗಜ, ಸಿಂಹ, ಸಗರನಾಡ ಜಾನಪದ ಕಾಷ್ಠ ಕಲಾಕೃತಿಗಳು–ಕೋನಾಳ, ಚಿಕ್ಕನಹಳ್ಳಿ, ಹೆಬ್ಬಾಳ, ಲಿಂಗಸೂಗೂರ, ರಾಯಚೂರ, ಗುಲ್ಬರ್ಗ, ಸೋಲಾಪುರ, ಮಹಾರಾಷ್ಟ್ರ.

## ಈರಣ್ಣ ಪಿ. ಕಂಬಾರ

'ಕಲಾಸೌರಭ', ನಂ.11, ಕೈಲಾಸ ನಗರ
ಶಹಾಬಜಾ ನಾಕಾ ಹತ್ತಿರ
ಕಲಬುರಗಿ – 585 103

ದೂರವಾಣಿ: 9341687177

**ಜನನ:** 01–07–1961

**ಶಿಕ್ಷಣ:** ಡಿಪ್ಲೊಮಾ–ಡ್ರಾಯಿಂಗ್ ಮತ್ತು ಪೇಂಟಿಂಗ್

**ಪ್ರಮುಖ ಪ್ರದರ್ಶನಗಳು:** ಗುಲ್ಬರ್ಗ–1984, ಗದಗ–1985, ಗುಲ್ಬರ್ಗ ಜಿಲ್ಲಾ ಕೈಗಾರಿಕಾ ವಸ್ತು ಪ್ರದರ್ಶನ ಮೇಳ, ಸುವರ್ಣ ಕರ್ನಾಟಕ ಕಲಾ ವೈಭವ–2008, ಅರವಿಂದ ಜನ್ಮೋತ್ಸವ ನಿಮಿತ್ತ ಕಲಾ ಪ್ರದರ್ಶನ–2008, ಬಿಲ್ಡ್ ಟೆಕ್ ವಸ್ತು ಪ್ರದರ್ಶನ–2005.

**ಪ್ರಶಸ್ತಿ/ಬಹುಮಾನಗಳು:** ವಿಶ್ವಕರ್ಮ ಧರ್ಮಪ್ರಚಾರ ಪಾಕ್ಷಿಕ ಪತ್ರಿಕೆ ನರೇಗಲ್ ಗದಗ–2006, ಕರ್ನಾಟಕ ರಾಜ್ಯ ವಿಶ್ವಕರ್ಮ ಸಮಾಜ ಸುವರ್ಣ ಮಹೋತ್ಸವ ಅಂಗವಾಗಿ ಮಯಬ್ರಹ್ಮ ಪ್ರಶಸ್ತಿ–2006, ಐ.ಎಫ್.ಐ ವಾರ್ಷಿಕ ಅತ್ಯುತ್ತಮ ಚಿತ್ರ–ಗುಲ್ಬರ್ಗ, 41ನೇ ಅಖಿಲ ಭಾರತೀಯ ಕರಕುಶಲ ಸಪ್ತಾಹ, ಗುಲ್ಬರ್ಗ–1995, ಬೆಂಗಳೂರು ವಾರ್ಷಿಕೋತ್ಸವ ಪ್ರದರ್ಶನದ ಅಂಗವಾಗಿ ಕಲಾರತ್ನ ಪ್ರಶಸ್ತಿ–2006.

## ಈರಪ್ಪ ಮಾನಪ್ಪ ಬಡಿಗೇರ

11, ನಂದೇಶ್ವರ ನಗರ
ವಿದ್ಯಾಗಿರಿ, ಬಾಗಲಕೋಟೆ

**ಜನನ:** 1–06–1951

**ಶಿಕ್ಷಣ:** 5ನೇ ತರಗತಿ

**ಗುರುಗಳು:** ತಂದೆ ಮಾನಪ್ಪ ಬಡಿಗೇರ

**ರಚಿಸಿರುವ ಪ್ರಮುಖ ಕೃತಿಗಳು:** ಮಂಗಳೂರಿನ ಮಂಗಳಾ ದೇವಸ್ಥಾನ, ಬೀದರ್ ಮತ್ತು ಬಾಗಲಕೋಟೆಯಲ್ಲಿ ತಲಬಾಗಿಲು, ಘಟಪ್ರಭಾದಲ್ಲಿ ಪಾಲಕಿ, ಹವೇಲಿಯಲ್ಲಿ ದ್ಯಾಮವ್ವನ ದೇವರು, ತುಕ್ಯಾನಹಟ್ಟಿಯಲ್ಲಿ ಸಿಂಹಾಸನ.

**ಪ್ರಶಸ್ತಿ/ಬಹುಮಾನಗಳು:** ವಿಶ್ವೇಶ್ವರಯ್ಯ ಸ್ಮಾರಕ ಮತ್ತು ಡಾ. ಅಬ್ದುಲ್ ಕಲಾಂ ಸ್ಮಾರಕ ಪುರಸ್ಕಾರಗಳು. ಬೆಂಗಳೂರು, ಬಾಗಲಕೋಟೆ ಮತ್ತು ಘಟಪ್ರಭಾದಲ್ಲಿ ಕಲಾಕೃತಿಗಳು ಪ್ರದರ್ಶನಗೊಂಡಿವೆ.



**ಈಶ್ವರ್ ಪಿ.**

ಚಿದಂಬರ ದೇವಸ್ಥಾನದ ಬಳಿ,
ಶ್ರೀರಾಮ ಬಡಾವಣೆ, ನಿಟುವಳ್ಳಿ,
ದಾವಣಗೆರೆ – 577 004

ದೂರವಾಣಿ: 95912 13416

**ಜನನ:** 16–10–1992

**ಶಿಕ್ಷಣ:** ಪ್ರದರ್ಶಕ ಕಲೆಯಲ್ಲಿ ಉನ್ನತ ಶಿಕ್ಷಣ

**ಶಿಲ್ಪಕಲಾ ಮಾಧ್ಯಮ:** ಮಿಶ್ರ

**ಪ್ರಮುಖ ಕೃತಿಗಳು:** ಸಮಕಾಲೀನ ಸೃಜನಾತ್ಮಕ ಕೃತಿಗಳು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ 12ನೇ ವಾರ್ಷಿಕ ಶಿಲ್ಪಕಲಾ ಪ್ರದರ್ಶನದಲ್ಲಿ ಸಮಕಾಲೀನ ಪ್ರಕಾರದಲ್ಲಿ ಬಹುಮಾನ. ನಾಡಿನ ಹಲವು ಕಡೆಗಳಲ್ಲಿ ನಡೆದ ಕಾರ್ಯಾಗಾರಗಳಲ್ಲಿ ಭಾಗವಹಿಸಿದ್ದಾರೆ.





**ಉಮಾಶಂಕರ್ ಎಸ್.ಎಲ್.**

ಶ್ರೀ ಬಸವೇಶ್ವರ ಶಿಲ್ಪಕಲಾ ಕುಟೀರ
ಹೊನ್ನೇನಹಳ್ಳಿ, ದಿಬ್ಬೂರು ಅಂಚೆ
ತುಮಕೂರು

ದೂರವಾಣಿ: 89711 75101

**ಜನನ:** 19–09–1987

**ಶಿಕ್ಷಣ:** ಬಿ.ಎಫ್.ಎ. ಮತ್ತು ಎಂ.ಎಫ್.ಎ.

**ಶಿಲ್ಪಕಲಾ ಮಾಧ್ಯಮ:** ಶಿಲೆ

**ಪ್ರಮುಖ ಪ್ರದರ್ಶನಗಳು:** ಅಕಾಡೆಮಿಯ ವಿವಿಧ ಶಿಬಿರಗಳಲ್ಲಿ ಭಾಗವಹಿಸಿದ ಅನುಭವ.

**ಪ್ರಶಸ್ತಿ / ಬಹುಮಾನಗಳು:** ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ 10ನೇ ವಾರ್ಷಿಕ ಶಿಲ್ಪಕಲಾ ಪ್ರದರ್ಶನದಲ್ಲಿ ಬಹುಮಾನ.





## ಓಂಕಾರಮೂರ್ತಿ ಜಿ.ಬಿ

S/o ಜಿ. ಭೀಮಾಚಾರ್
ನಂ. 179, 1ನೇ ಬ್ಲಾಕ್, ಕುಂದೂರು,
ಹೊನ್ನಾಳಿ ತಾಲ್ಲೂಕು
ದಾವಣಗೆರೆ ಜಿಲ್ಲೆ – 577219

ದೂರವಾಣಿ: 98864 76173



**ಜನನ:** 11–02–1984

**ಶಿಕ್ಷಣ:** ಬಿ.ಎಫ್.ಎ. (ಶಿಲ್ಪಕಲೆ), ಎಂ.ವಿ.ಎ. (ಶಿಲ್ಪಕಲೆ)

**ಗುರುಗಳು:** ಶ್ರೀ ವೆಂಕಟಾಚಲಪತಿ

**ಪ್ರಮುಖ ಪ್ರದರ್ಶನಗಳು:** ಕರ್ನಾಟಕ ಚಿತ್ರಕಲಾ ಪರಿಷತ್ ವಾರ್ಷಿಕ ಪ್ರದರ್ಶನ–2012, ಲಲಿತಕಲಾ ಅಕಾಡೆಮಿ ನವದೆಹಲಿ–2012, ಕಲಾ ಸಮಾವೇಶ–ವೆಂಕಟಪ್ಪ ಆರ್ಟ್ ಗ್ಯಾಲರಿ–2012, ಆಲ್ ಇಂಡಿಯಾ ಆರ್ಟ್ ಕಾಂಟೆಸ್ಟ್– ನಾಗಪುರ–2004, 2011, ಮೈಸೂರು ದಸರಾ ಕಲಾಮೇಳ–2011, ನಾಸ್ಟಾಲ್ಜಿಯಾ 10, ಪಂಜಾಬ್ರಿ, ಗೌಹಾಟಿ–2010

**ಪ್ರಶಸ್ತಿ / ಬಹುಮಾನಗಳು:** ಎಕ್ಸಲೆಂಟ್ ಪರ್ಫಾರ್ಮೆನ್ಸ್–ಎಂ.ವಿ.ಎ. ಅಂತಿಮ ವರ್ಷ, ಮೈಸೂರು ದಸರಾ ಪ್ರದರ್ಶನದಲ್ಲಿ ಬಹುಮಾನ–2011, ಯಂಗ್ ಟ್ಯಾಲೆಂಟೆಡ್ ಆರ್ಟಿಸ್ಟ್ ಅವಾರ್ಡ್–ತಂಜಾವೂರು, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವಾರ್ಷಿಕ ಶಿಲ್ಪಕಲಾ ಪ್ರದರ್ಶನ–2006, ನ್ಯಾಷನಲ್ ಯೂತ್ ಫೆಸ್ಟಿವಲ್ ಹರಿಯಾಣ–2005, ಇಂಟರ್ ಯೂನಿವರ್ಸಿಟಿ ಸೌತ್ ಝೋನ್ ಯೂತ್ ಫೆಸ್ಟಿವಲ್ ಬೆಂಗಳೂರು–2005–06



## ಕರಣಪ್ಪ

S/o ಗುರಪ್ಪ ಕಂಚಗಾರ,
ಪೋ। ದೋರನಹಳ್ಳಿ, ತಾ। ಶಹಾಪುರ,
ಜಿ। ಯಾದಗಿರಿ

ದೂರವಾಣಿ: 9916204868



**ವಯಸ್ಸು:** 65 ವರ್ಷ

**ಶಿಕ್ಷಣ:** ಆರನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಕಾಷ್ಠ

**ಗುರುಗಳು:** ಶ್ರೀ ಸಂಗಪ್ಪ ಕಂಬಾರ

**ಪ್ರಮುಖ ಕೃತಿಗಳು:** ದೋರನಹಳ್ಳಿ ರಥ, ಬಸವಣ್ಣ ರಥ 31 ಅಡಿ, ಗ್ರಾಮದೇವತೆ–ಕೊಣಚಪ್ಪಳ್ಳಿ, ದಿಗ್ಗಿ ಬೇವಿನಹಳ್ಳಿ

## ಕರಣಪ್ಪ ಬಸಣ್ಣ ಕಂಚಗಾರ

ಕೂಡೇಕಲ್
ತಾ। ಸುರಪೂರ
ಜಿ। ಯಾದಗಿರಿ-585237

ದೂರವಾಣಿ: 9902717148

**ಜನನ:** 22-07-1963

**ಶಿಕ್ಷಣ:** ಎಸ್.ಎಸ್.ಎಲ್.ಸಿ.

**ಶಿಲ್ಪಕಲಾ ಮಾಧ್ಯಮ:** ಕಾಷ್ಠ, ಶಿಲೆ

**ಗುರುಗಳು:** ಶ್ರೀ ಬಸಣ್ಣ ಕಂಚುಗಾರ

**ಪ್ರಮುಖ ಕೃತಿಗಳು:** ಗ್ರಾಮದೇವತೆ-ಕಾಷ್ಠ, ರಾಘವೇಂದ್ರ ಮೂರ್ತಿ-ಕಾಷ್ಠ, ಹನುಮಾನ ಮೂರ್ತಿ-ಶಿಲೆ.

**ಪ್ರಶಸ್ತಿ / ಬಹುಮಾನಗಳು:** ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ 10ನೇ ವಾರ್ಷಿಕ ಪ್ರದರ್ಶನದ ಬಹುಮಾನ ವಿಜೇತರು.

## ಕಾಂತರಾಜು ಆರ್.

ನಂ. 1, 1-ಎಚ್. ಮುಖ್ಯರಸ್ತೆ
8ನೇ ಅಡ್ಡರಸ್ತೆ, ಜೆ.ಎಸ್. ನಗರ
ನಂದಿನಿ ಲೇಔಟ್
ಬೆಂಗಳೂರು – 560 096

ದೂರವಾಣಿ: 96113 31226

**ಜನನ:** 16-03-1978

**ಶಿಕ್ಷಣ:** ಎಸ್.ಎಸ್.ಎಲ್.ಸಿ., ಡಿಪ್ಲೊಮ ಇನ್ ಡ್ರಾಯಿಂಗ್ ಅಂಡ್ ಪೈಂಟಿಂಗ್, ಡಿ.ಎಂ.ಸಿ.

**ಶಿಲ್ಪಕಲಾ ಮಾಧ್ಯಮ:** ಕಾಷ್ಠ, ಶಿಲೆ

**ಪ್ರಮುಖ ಪ್ರದರ್ಶನಗಳು:** ಕಲಾಮಂದಿರ ಸ್ಕೂಲ್ ಆಫ್ ಆರ್ಟ್ ವಾರ್ಷಿಕ ಕಲಾ ಪ್ರದರ್ಶನ-1994-99, ಮೈಸೂರು ದಸರಾ ಕಲಾ ಪ್ರದರ್ಶನ-1995-2000, ಸಮಾಸಂ ಗ್ರೂಪ್ ಆಫ್ ಆರ್ಟ್, ಬೆಂಗಳೂರು-2011, ಶಿಲ್ಪಕಲಾ ಅಕಾಡೆಮಿ ವಾರ್ಷಿಕ ಕಲಾ ಪ್ರದರ್ಶನ-2004-11.

**ಪ್ರಶಸ್ತಿ / ಬಹುಮಾನಗಳು:** ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ವಾರ್ಷಿಕ ಶಿಲ್ಪಕಲಾ ಅಕಾಡೆಮಿ ಅವಾರ್ಡ್-2011

ಶಿಲ್ಪಕಲಾ ಶಿಬಿರಗಳಲ್ಲಿ ಭಾಗವಹಿಸಿದ ಅನುಭವ.



## ಕಾಶಿಪತಿ ಮೋನಪ್ಪ ಬಡಿಗೇರ

ಶಿರಿಹಯ್ಯಾಳ ಗ್ರಾಮ ಮತ್ತು ಅಂಚೆ
ಶಹಾಪುರ ತಾ॥ ಯಾದಗಿರಿ ಜಿಲ್ಲೆ

ದೂರವಾಣಿ: 9008987264



**ವಯಸ್ಸು:** 75 ವರ್ಷ

**ಪ್ರಮುಖ ಕೃತಿಗಳು:** ತಲೆ ಬಾಗಿಲು-ಮುನಮಟಗಿ, ದ್ಯಾವಮ್ಮ-ಹತ್ತಿಕುಣಿ, ಕುದುರೆ, ಪಲ್ಲಕ್ಕಿ, ವಡವಟಗಿ.

**ಪ್ರಶಸ್ತಿ / ಬಹುಮಾನಗಳು:** ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಶಿಲ್ಪಕಲಾ ಸಂಭ್ರಮ-20ರ ಅಭಿನಂದನಾ ಪುರಸ್ಕಾರ-2016.



## ಕಾಳಪ್ಪ ದೇವೇಂದ್ರಪ್ಪ ಬಡಿಗೇರ

ಹುಣಸಗಿ ಪೋ., ಸಾ। ಹುಣಸಗಿ,
ಸುರಪೂರ ತಾ., ಯಾದಗಿರಿ ಜಿಲ್ಲೆ.

ದೂರವಾಣಿ: 9972864663



**ಜನನ:** 26-06-1966

**ಶಿಕ್ಷಣ:** ಏಳನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಕಾಷ್ಠ

**ಗುರುಗಳು:** ಶ್ರೀ ದೇವೀಂದ್ರಪ್ಪ ಬಡಿಗೇರ

**ಪ್ರಮುಖ ಪ್ರದರ್ಶನಗಳು:** ಸಗರವಾಡ ಜಾನಪದ ಕಲೆ-ಸುರಪುರದ ಕ್ಯಾಂಪ್

ಪ್ರಮುಖ ಕೃತಿಗಳು: ಲಿಂಗದಳ್ಳಿ ಗ್ರಾಮದೇವತೆ, ಜಲಪೂರ-ದುರ್ಗಾದೇವಿ, ಹುಣಸಗಿ-ಗ್ರಾಮದೇವತೆ, ಕೆಂಚಮ್ಮದೇವಿ, ಜಗದಂಬಾದೇವಿ, ಕಚಗಾನೂರ-ಗ್ರಾಮದೇವತೆ, ಕನ್ನಳ್ಳಿ-ಗ್ರಾಮದೇವತೆ, ಕರಕಳ್ಳಿ-ಗ್ರಾಮದೇವತೆ, ಬೂದಿನಾಳ-ಗ್ರಾಮದೇವತೆ, ಇಸ್ಲಾಮಪೂರ-ಗ್ರಾಮದೇವತೆ, ಶಹಾಪುರ-ದುರ್ಗಾದೇವಿ



## ಕಾಳಪ್ಪ ದ್ಯಾಮಣ್ಣ ಬಡಿಗೇರ

ಅನಗವಾಡಿ ಅಂಚೆ, ಬೀಳಗಿ ತಾ.
ಬಾಗಲಕೋಟೆ ಜಿಲ್ಲೆ – 587 116.

ದೂರವಾಣಿ: 99003 46647



**ಜನನ:** 04–06–1987

**ಶಿಕ್ಷಣ:** ಬಿ.ವಿ.ಎ. ಶಿಲ್ಪಕಲೆ

**ಶಿಲ್ಪಕಲಾ ಮಾಧ್ಯಮ:** ಶಿಲೆ ಮತ್ತು ಕಾಷ್ಠ

**ಗುರುಗಳು:** ಶ್ರೀ ಗಣೇಶ ಲಕ್ಷ್ಮೀನಾರಾಯಣ

**ಪ್ರಮುಖ ಪ್ರದರ್ಶನಗಳು:** ರಾಜ್ಯಮಟ್ಟದ ಶಿಲ್ಪಕಲಾ ಪ್ರದರ್ಶನ, ಶಿರಸಂಗಿ–2011, 2012; ಬೀಳಗಿ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ಬೀಳಗಿ–2011; ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವಾರ್ಷಿಕ ಶಿಲ್ಪಕಲಾ ಪ್ರದರ್ಶನ–2009.

**ಪ್ರಮುಖ ಕೃತಿಗಳು:** ಶಿಲೆ: 3 1/2 ಅಡಿ ಲಕ್ಷ್ಮಿ–ಬಿಜಾಪುರ, 2 1/2 ಅಡಿ ವೆಂಕಟೇಶ್ವರ–ಬಾಗಲಕೋಟೆ, 2 ಅಡಿ ಗಣೇಶ–ಸವದತ್ತಿ, 3 1/4 ಅಡಿ ದುರ್ಗಾದೇವಿ–ಕಾಚಾಪುರ; ಕಾಷ್ಠ: 2 ಅಡಿ ಕೃಷ್ಣ–ಬಿಡದಿ

**ಪ್ರಶಸ್ತಿ/ಬಹುಮಾನಗಳು:** ಶಿರಸಂಗಿಯಲ್ಲಿ ರಾಜ್ಯಮಟ್ಟದ ಶಿಲ್ಪಕಲಾ ಪ್ರದರ್ಶನದಲ್ಲಿ ಅತ್ಯುತ್ತಮ ಕಲಾಕೃತಿ ಬಹುಮಾನ–2011

ವಿವಿಧ ಶಿಬಿರಗಳಲ್ಲಿ ಭಾಗವಹಿಸಿದ ಅನುಭವ, ಪ್ರಜಾವಾಣಿ ಮತ್ತು ಆಂದೋಲನ ಪತ್ರಿಕೆಗಳಲ್ಲಿ ಇವರ ಸಾಧನೆಯ ಕುರಿತು ಲೇಖನಗಳು ಪ್ರಕಟವಾಗಿವೆ.



## ಕಾಳಪ್ಪ ಬಡಿಗೇರ

S/o ತಿಪ್ಪಣ್ಣ ಬಡಿಗೇರ,
ಮೌನೇಶ್ವರ ಗುಡಿ ಹತ್ತಿರ,
ದೊಡ್ಡಸಾಗರ ಪೋ., ತಾ। ಶಹಾಪುರ,
ಯಾದಗಿರಿ ಜಿಲ್ಲೆ–585223

ದೂರವಾಣಿ:9902368957



**ಜನನ:** 19–06–1950

**ಶಿಕ್ಷಣ:** ಐದನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಕಾಷ್ಠ (ಸಗರನಾಡ ಜಾನಪದ ಕಲೆ)

**ಗುರುಗಳು:** ಶ್ರೀ ತಿಪ್ಪಣ್ಣ ಬಡಿಗೇರ

ಪ್ರಮುಖ ಕೃತಿಗಳು: ಗ್ರಾಮದೇವತೆ, ತಲಬಾಗಿಲು, ಕುದುರೆ, ಪಡಸಾಲಿ ಜೋಡಣೆ–ಸಗರ, ಶಹಾಪುರ, ದೇವಕೇರಿ, ಹಳಿಸಗರ, ದಸ್ತಾಪುರ, ಸುರಪುರ, ಕೆಂಭಾವಿ, ಹತ್ತಿಗೂಡ್ರು, ಯಾದಗಿರಿ



## ಕಾಳಪ್ಪ ವಿಶ್ವಕರ್ಮ

S/o ಯಮನಪ್ಪ ಬಡಿಗೇರ,
ಕಸಬಾಲಿಂಗಸೂಗೂರ,
ಲಿಂಗಸೂಗೂರ ತಾ., ರಾಯಚೂರು ಜಿಲ್ಲೆ.

ದೂರವಾಣಿ:9945782167



ಜನನ: 27-06-1950

ಶಿಕ್ಷಣ: ಆರನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಕಾಷ್ಠ

**ಪ್ರಮುಖ ಪ್ರದರ್ಶನಗಳು:** ಕಲಬುರ್ಗಿ ಕಂಪು

**ಪ್ರಮುಖ ಕೃತಿಗಳು:** ಗ್ರಾಮದೇವತೆ ಕೆಂಚಮ್ಮ, ದುರ್ಗಾದೇವಿ, ಮಾರಮ್ಮ, ಮುಸ್ಲಿಂ ಸಮುದಾಯದವರಿಗೆ ಡೊಲಿ ಎಬೆರಾಳ್-ಯಲಗಲದಿನ್ನಿ;ಮಾರಿ ದೇವತೆ-ಎರಡೋಣಿ, ಅಂಕಸದೊಡ್ಡಿ, ಆನೆಹೊಸೂರು, ಅಮರೇಶ್ವರ, ಬಳ್ಳಾರಿ, ಬುದ್ದಿನ್ನಿ

ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ವಿಜಯವಾಣಿ ಪತ್ರಿಕೆಗಳಲ್ಲಿ ಇವರ ಸಾಧನೆ ಪ್ರಕಟ.



## ಕಾಳಪ್ಪ ಶರಬಣ್ಣ ಬಡಿಗೇರ

ಸಾ। ನಾರಾಯಣಪುರ,
ತಾ। ಸುರಪುರ, ಜಿ। ಯಾದಗಿರಿ.

ದೂರವಾಣಿ: 8861818797



ಜನನ: 22-7-1970

**ಶಿಕ್ಷಣ:** ಎಸ್.ಎಸ್.ಎಲ್.ಸಿ.

**ಶಿಲ್ಪಕಲಾ ಮಾಧ್ಯಮ:** ಶಿಲೆ, ಕಾಷ್ಠ

**ಪ್ರಮುಖ ಕೃತಿಗಳು:** ಮಹಾಲಿಂಗರಾಯ ಶಿಖರ(ಶಿಲೆ)-ಕೋಟೆಗುಡ್ಡ, ಬಸವೇಶ್ವರ ಪಲ್ಲಕ್ಕಿ (ಕಾಷ್ಠ)-ಕೊಡೆಕಲ್, ಸಂಗಮೇಶ್ವರ ಪಲ್ಲಕ್ಕಿ (ಕಾಷ್ಠ)-ಖೈಡಗಿ ಕಾಗಿನೆಲೆ, ದೇವಿಮೂರ್ತಿ (ಕಾಷ್ಠ)-ರಾಯನಗೂಳ.



## ಕುಮಾರ್ ವೈ.

ನ.781/31–2, ಸರಸ್ವತಿ ಬಡಾವಣೆ
1ನೇ ಮುಖ್ಯರಸ್ತೆ, 4ನೇ ಅಡ್ಡರಸ್ತೆ
2ನೇ ಚರ್ಚ್ ಹಿಂಭಾಗ
ದಾವಣಗೆರೆ – 577004

ದೂರವಾಣಿ: 99646 78986



**ಜನನ:** 10–04–1982

**ಶಿಕ್ಷಣ:** ಎಂ.ವಿ.ಎ.–ಶಿಲ್ಪಕಲೆ, ಬಿ.ಎಫ್.ಎ.–ಶಿಲ್ಪಕಲೆ

**ಪ್ರಮುಖ ಪ್ರದರ್ಶನಗಳು:** ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು, ಆರ್ಟ್ ಫೌಂಡೇಷನ್ ಸೆಕೆಂಡ್ ರಿಜನ್ ಕಲಾ ಪ್ರದರ್ಶನ, ಶಿಲ್ಪಕಲಾ ಪ್ರದರ್ಶನ 2001, ಯುನಿವರ್ಸಿಟಿ ಕಾಲೇಜ್ ಆಫ್ ಫೈನ್ ಆರ್ಟ್ ದಾವಣಗೆರೆ, ಕರ್ನಾಟಕ ಲಲಿತಕಲಾ ಅಕಾಡೆಮಿಯ ಶಿಲ್ಪಕಲಾ ಪ್ರದರ್ಶನ, ಕರ್ನಾಟಕ ಕಲಾಮೇಳ, ಕರ್ನಾಟಕ ಶಿಲ್ಪ ಕಲಾ ಅಕಾಡೆಮಿ ಶಿಲ್ಪಕಲಾ ಪ್ರದರ್ಶನ, ಕಲಾ ಪ್ರದರ್ಶನ 2011 ದಾವಣಗೆರೆ ಇತ್ಯಾದಿ.

**ಪ್ರಶಸ್ತಿ / ಬಹುಮಾನಗಳು:** ರಾಷ್ಟ್ರೀಯ ಔದ್ಯೋಗಿಕ ಎಕ್ಸಲೆನ್ಸ್ ಪ್ರಶಸ್ತಿ–2013, ಲಲಿತಕಲಾ ಅಕಾಡೆಮಿಯ ರಾಜ್ಯಮಟ್ಟದ ಶಿಲ್ಪಕಲೆಯ ಬಹುಮಾನ 2004, 130ನೇ ಮಹಾತ್ಮಗಾಂಧಿ ಜಯಂತಿಯಲ್ಲಿ ರೋಟರಿ ಕ್ಲಬ್ ಪ್ರಶಸ್ತಿ, ಯುಸೂಫ್ ಅರಕಲ್ ಪ್ರಶಸ್ತಿ 2003 ಕೇಂದ್ರೀಯ ಲಲಿತಕಲಾ ಅಕಾಡೆಮಿಯಿಂದ ರಾಷ್ಟ್ರೀಯ ಶಿಷ್ಯವೇತನ 2005–06.

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.



## ಕುಮಾರ ಬಾಬು ಘಸ್ತೆ

ಪಠಾನ್‌ಕುಡಿ
ಚಿಕ್ಕೋಡಿ ತಾಲ್ಲೂಕು
ಬೆಳಗಾವಿ ಜಿಲ್ಲೆ

ದೂರವಾಣಿ: 99452 99820



**ಜನನ:** 01–06–1982

**ಶಿಕ್ಷಣ:** ಬಿ.ವಿ.ಎ., ಎ.ಟಿ.ಎ.

**ಶಿಲ್ಪಕಲಾ ಮಾಧ್ಯಮ:** ಸಿಮೆಂಟ್

**ಪ್ರಮುಖ ಪ್ರದರ್ಶನಗಳು:** ಬೆಂಗಳೂರಿನ ಚಿತ್ರಸಂತೆ, ಕಲಬುರುಗಿ, ನಾಗಪುರ, ದಸರಾ ಪ್ರದರ್ಶನ, ಕ್ಯಾಮ್ಲಿನ್ ಸ್ಪರ್ಧೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ – ಬೆಂಗಳೂರು, ಹುಲಕೋಟಿ, ರಾಮನಗರ, ಕಾರವಾರ ಇತ್ಯಾದಿ

**ಪ್ರಮುಖ ಕೃತಿಗಳು:** ಆಲಮಟ್ಟಿಯ ಕೃಷ್ಣಾ ಉದ್ಯಾನವನ, ನವನಗರ, ಮಹಾರಾಷ್ಟ್ರದ ಇಸ್ಲಾಂಪುರ, ಮುಂಬಯಿ, ಕನ್ನೇರಿಮಠ, ಕೊಲ್ಹಾಪುರ

## ಕೃಷ್ಣಮೂರ್ತಿ ಎಚ್.ಎನ್.

ಕಟ್ಟೆಹಕ್ಕಲು ಅಂಚೆ,
ತೀರ್ಥಹಳ್ಳಿ ತಾಲ್ಲೂಕು,
ಶಿವಮೊಗ್ಗ ಜಿಲ್ಲೆ

ದೂರವಾಣಿ: 9449638649

**ಜನನ:** 1947

**ಶಿಕ್ಷಣ:** ಬಿ.ಎ., ಆರ್ಟ್ (ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್, ಮೈಸೂರು), ಪೇಂಟಿಂಗ್ ಮತ್ತು ಸ್ಕಲ್ಪ್‌ಚರ್ (ಶಾಂತಿನಿಕೇತನ)

**ಪ್ರಮುಖ ಪ್ರದರ್ಶನಗಳು:** ರಾಜ್ಯ ಹಾಗೂ ರಾಷ್ಟ್ರ ಮಟ್ಟದ ಪ್ರದರ್ಶನಗಳು, ಆನಂದ ಮೇಳ ಕೊಲ್ಕತ್ತ–1967, ದಾವಣಗೆರೆ–1970.

**ಪ್ರಶಸ್ತಿ / ಬಹುಮಾನಗಳು:** ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಬಹುಮಾನ–2002, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ – 2003

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

## ಖಾಜೇಸಾಬ ಅಲ್ಲಿಸಾಬ ನದಾಫ

ಕೇರಾಫ್ ಅಲ್ಲಿಸಾಬ ನದಾಫ,
ಶ್ರೀ ಸಿದ್ಧಾರೂಢ ಶಿಲ್ಪಕಲಾ ಕೇಂದ್ರ, ಬೀಳಗಿ ಕ್ರಾಸ್
ಬೀಳಗಿ ತಾ. ಬಾಗಲಕೋಟೆ ಜಿಲ್ಲೆ – 587 116

ದೂರವಾಣಿ: 99806 98097

**ಜನನ:** 01–06–1987

**ಶಿಕ್ಷಣ:** ಡಿ.ಎಂ.ಸಿ. (ಡ್ರಾಯಿಂಗ್ ಮಾಸ್ಟರ್ ಕೋರ್ಸ್)

**ಶಿಲ್ಪಕಲಾ ಮಾಧ್ಯಮ:** ಶಿಲೆ

**ಗುರುಗಳು:** ಅಲ್ಲಿಸಾಬ ಸೈ. ನದಾಫ

**ಪ್ರಮುಖ ಕೃತಿಗಳು:** ಶ್ರೀ ಅರಣ್ಯ ಸಿದ್ದೇಶ್ವರ ಮಹಾದ್ವಾರ–ಕಾಡಾಪುರ, ಸಮಾಧಿ ಗದ್ದುಗೆ, ಮಂಟಪ ಶಿಲಾ ಕೆತ್ತನೆ–ಹುಬ್ಬಳ್ಳಿ, ದೇವಾಲಯಗಳ ಅಲಂಕಾರಿಕ ಶಿಲ್ಪಗಳ ಕೆತ್ತನೆ–ಜನವಾಡ ಮತ್ತು ಜುಮನಾಳ, ಕೈಲಾಸ ಬಾಗಿಲಿನ ಅಲಂಕಾರಿಕ ಕಂಬಗಳು–ಶ್ರೀಶೈಲ (ಆಂಧ್ರಪ್ರದೇಶ)



## ಗಣಪತಿ ಎನ್. ಬಡಿಗೇರ

ಕಲಾದಗಿ,
ಬಾಗಲಕೋಟೆ ತಾಲೂಕು–587204

ದೂರವಾಣಿ: 9611350243



**ಜನನ:** 17–07–1984

**ಶಿಕ್ಷಣ:** ಎಸ್.ಎಸ್.ಎಲ್.ಸಿ.

**ಶಿಲ್ಪಕಲಾ ಮಾಧ್ಯಮ:** ಶಿಲೆ, ಕಾಷ್ಠ, ಕಂಚು.

**ಪ್ರಮುಖ ಕೃತಿಗಳು:** ಗಣೇಶ, ಈಶ್ವರ, ಲಿಂಗ, ಇನ್ನಿತರ ಮೂರ್ತಿಗಳು ಮತ್ತು ಬಾಗಿಲು ಚೌಕಟ್ಟು, ಬಸವಣ್ಣನ ಮೂರ್ತಿ–ಸೊಲ್ಲಾಪುರ, ಬಾಗಿಲು ಚೌಕಟ್ಟು–ಹುಬ್ಬಳ್ಳಿ.

**ಪ್ರಶಸ್ತಿ/ಬಹುಮಾನಗಳು:** ಚಾಲುಕ್ಯ ಉತ್ಸವ, ಶಿರಸಂಗಿ ವಿಶ್ವಕರ್ಮ ಉತ್ಸವಗಳಲ್ಲಿ ಪಡೆದ ಬಹುಮಾನಗಳು.



## ಗರುಡಾಚಾರ್ ಎಸ್.ಎನ್.

ಸ್ವಾಂದೇನಹಳ್ಳಿ ಗ್ರಾಮ ಮತ್ತು ಅಂಚೆ
ಕಸಬಾ ಹೋಬಳಿ, ತುಮಕೂರು ತಾ॥, ಜಿ

ದೂರವಾಣಿ: 8971175101



**ಜನನ:** 1934

**ಶಿಲ್ಪಕಲಾ ಮಾಧ್ಯಮ:** ಲೋಹ

**ಪ್ರಮುಖ ಕೃತಿಗಳು:** 25ಕ್ಕೂ ಹೆಚ್ಚು ಗ್ರಾಮದೇವತೆಗಳು, ಅನೇಕ ಚಿಕ್ಕ ವಿಗ್ರಹಗಳು. ದಾಖಲೆಯ ಸಾಧನೆ: 9 ವರ್ಷಗಳಲ್ಲಿ 16,000 ಕಾಲ್ಗೆಜ್ಜೆಗಳನ್ನು ನಿರ್ಮಿಸಿರುವುದು.

**ಪ್ರಶಸ್ತಿ / ಬಹುಮಾನಗಳು:** ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಶಿಲ್ಪಕಲಾ ಸಂಭ್ರಮ–20ರ ಅಭಿನಂದನಾ ಪುರಸ್ಕಾರ–2016.

ರಂಗಭೂಮಿ ಕಲಾವಿದರು.



## ಗಾಯತ್ರಿ ಎ. ಶಿಲ್ಪಿ

ಕೇರಾಫ್ ಅಶ್ವಿನ್‌ಕುಮಾರ್ ಎಂ. ಪೊದ್ದಾರ,
ನಂ.11–421/22, 'ಸ್ವರಾಲಯ' ಸಮತಾ ಕಾಲೋನಿ
ಬ್ರಹಪುರ, ಗುಲ್ಬರ್ಗ–585103

ದೂರವಾಣಿ: 9845965029 / 9844932610



ಜನನ: 12–07–1988

**ಶಿಕ್ಷಣ:** ಎಂ.ಎ. ಮ್ಯೂಸಿಕ್, ಬಿ.ಎಫ್.ಎ. ಮೊದಲನೇ ವರ್ಷ, ಪ್ರಸ್ತುತದಲ್ಲಿ ಸಾಂಪ್ರದಾಯಿಕ ಶಿಲ್ಪ ಅಧ್ಯಯನ

**ಶಿಲ್ಪಕಲಾ ಮಾಧ್ಯಮ:** ಕಾಷ್ಠ, ಶಿಲೆ, ಲೋಹ

**ಗುರುಗಳು:** ಚಂದ್ರಶೇಖರ ವೈ. ಶಿಲ್ಪಿ

**ಪ್ರಮುಖ ಪ್ರದರ್ಶನಗಳು:** ಜನಪದ ಲೋಕ, ರಾಮನಗರ ತಾಲೂಕು–2013; ಕೆನರಾ ಬ್ಯಾಂಕ್ ಮಾರ್ಗದರ್ಶನದಲ್ಲಿ ಬೆಂಗಳೂರಿನ ಕಬ್ಬನ್‌ಪಾರ್ಕ್‌ನಲ್ಲಿ ಶಿಲ್ಪ ಪ್ರದರ್ಶನ–2012; ಶಿಲ್ಪಕಲಾ ಅಕಾಡೆಮಿ ವತಿಯಿಂದ ಗುಲ್ಬರ್ಗದಲ್ಲಿ ಶಿಲ್ಪ ಪ್ರದರ್ಶನ–2005

**ಪ್ರಮುಖ ಕೃತಿಗಳು:** ಸರಸ್ವತಿ, ಕುಬೇರ, ಗಣೇಶ, ಆನೆ, ಹಂಸ, ಕೀರ್ತಿಮುಖ, ಲಕ್ಷ್ಮಿ, ಸಿದ್ದೇಶ್ವರಮೂರ್ತಿ– ಬೆಂಗಳೂರು, ಜೇವರ್ಗಿ, ಗುಲ್ಬರ್ಗ, ಮೈಸೂರು. ವಿದೇಶ– ಸ್ಕಾಟ್‌ಲ್ಯಾಂಡ್, ಇಟಲಿ.

**ಪ್ರಶಸ್ತಿ/ಬಹುಮಾನಗಳು:** ಬಸವ ಸಮಿತಿ ವಿಲಾಸವತಿ ಖೂಬಾ ಅವರ ನೆರವಿನಲ್ಲಿ ನಡೆಯುವ ಅಕ್ಕನ ಸಮ್ಮೇಳನದಲ್ಲಿ ಪ್ರಶಸ್ತಿ–2009; ರಾಜ್ಯಮಟ್ಟದಲ್ಲಿ ಮಹಿಳಾ ಯುವಜನೋತ್ಸವದಲ್ಲಿ ಪ್ರಥಮ ಬಹುಮಾನ, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ 10ನೇ ವಾರ್ಷಿಕ ಶಿಲ್ಪಕಲಾ ಪ್ರದರ್ಶನ ಬಹುಮಾನ.



## ಗೀತಾಂಜಲಿ ಬಿ.ಆರ್.

'ಡಾಲಿ', 79/2
ಐದನೇ ಅಡ್ಡರಸ್ತೆ, ರಾಜೇಂದ್ರನಗರ
ಮೈಸೂರು

ದೂರವಾಣಿ: 9886282894



**ಶಿಕ್ಷಣ:** ಎಂ.ಎಫ್.ಎ. ಪಿಹೆಚ್.ಡಿ.

**ಶಿಲ್ಪಕಲಾ ಮಾಧ್ಯಮ:** ಶಿಲೆ

**ಪ್ರಮುಖ ಪ್ರದರ್ಶನಗಳು:** 1997–ಟೆರ್ರಾಕೋಟಾ ಕಾರ್ಯಾಗಾರ, ಮೈಸೂರು; 1998– ದಸರಾ ವಸ್ತುಪ್ರದರ್ಶನ, ಮೈಸೂರು; 1999– ನಂದನ್ ಮೇಳ, ಶಾಂತಿನಿಕೇತನ, ಪಶ್ಚಿಮ ಬಂಗಾಲ; 2001– ಕಂಚಿನ ಕಾರ್ಯಾಗಾರ ಶಾಂತಿನಿಕೇತನ, ಫೈಬರ್ ಕ್ಯಾಸ್ಟಿಂಗ್ (ಚಾಲುಕ್ಯ ಶೈಲಿಯ ಶಿಲ್ಪಗಳು), ಕನ್ನಡ ವಿಶ್ವವಿದ್ಯಾಲಯ; 2008– ಸಮೂಹ ಕಲಾ ಪ್ರದರ್ಶನ, ಸ್ವಸ್ತಿ ಕಲಾ ಗ್ಯಾಲೆರಿ, ಬೆಂಗಳೂರು; 2011– ಕಲಾಮೇಳ, ಮೈಸೂರು

**ಪ್ರಮುಖ ಕೃತಿಗಳು: ಸಂಗ್ರಹ:** ಜೋಗೆನ್ ಚೌದರಿ, ಅಮಿತಾಭ್ ಸೇನ್ ಗುಪ್ತಾ, ಲಲಿತಕಲಾ ಅಕಾಡೆಮಿ ಚೆನ್ನೈ, ಮೈಸೂರು, ಬೆಂಗಳೂರು, ಬಾದಾಮಿ, ಕೇರಳ

**ಪ್ರಶಸ್ತಿ / ಬಹುಮಾನಗಳು:** ದಸರಾ ವಸ್ತುಪ್ರದರ್ಶನ, ಮೈಸೂರು, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ತೃತೀಯ ವಾರ್ಷಿಕ ಶಿಲ್ಪಕಲಾ ಪ್ರದರ್ಶನ ಬಹುಮಾನ.

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.



## ಗುಡ್ಲಾನೂರು ದೇಸಾಯಿ ರಾಮರಾವ್

ಶ್ರೀ ಶಾರದಾ ಶಿಲ್ಪಕಲಾ ಮಂದಿರ
ಕಲಾದಗಿ ರಸ್ತೆ, ವಿದ್ಯಾಗಿರಿ
ಬಾಗಲಕೋಟೆ - 587 102

ದೂರವಾಣಿ: 94486 06464



**ಜನನ:** 9-01-1965

**ಶಿಕ್ಷಣ:** ಡಿ.ಎಂ.ಸಿ., ಎ.ಎಂ. (ಆರ್ಟ್ ಮಾಸ್ಟರ್)

**ಗುರುಗಳು:** ಶ್ರೀ ಎನ್.ಎನ್. ಬಡಿಗೇರ್ ಮತ್ತು ಮಲಪ್ಪ ಮಾಯಾಚಾರಿ

**ಮಾಧ್ಯಮ:** ಶಿಲೆಯಲ್ಲಿ ಮೂರ್ತಿ ನಿರ್ಮಾಣ ಮತ್ತು ಕಾಷ್ಠಶಿಲ್ಪ

**ರಚಿಸಿರುವ ಪ್ರಮುಖ ಕೃತಿಗಳು:** ಬೃಂದಾವನ- ಹಾರೋಗೇರಿ, ಹೈದರಾಬಾದ್, ದಾನಮ್ಮ- ಸೊಲ್ಲಾಪುರ, ಹೇಮರೆಡ್ಡಿ ಮಲ್ಲಮ್ಮ- ಬೀದರ್, ದುರ್ಗಾದೇವಿ- ಬೆಳಗಾವಿ, ಸ್ವಾಮಿ ವಿವೇಕಾನಂದ- ಬನಶಂಕರಿ, ಮಹಾತ್ಮಾಗಾಂಧಿ- ಸಿರಗುಪ್ಪ, ಸಿದ್ದಲಿಂಗೇಶ್ವರ- ಬಾಗಲಕೋಟೆ ಮತ್ತು ಮಾರುತಿ- ಪುಣೆ

ಬೆಂಗಳೂರು ಮತ್ತು ಬೆಳಗಾವಿಯ ಶಿಲ್ಪಕಲಾಕೃತಿಗಳ ಪ್ರದರ್ಶನ.

**ಪ್ರಶಸ್ತಿ/ಬಹುಮಾನಗಳು:** 2013ರಲ್ಲಿ 'ಭಾರ್ಗವ' ಪ್ರಶಸ್ತಿ, ಮತ್ತು ಬಾಗಲಕೋಟೆ ಜಿಲ್ಲಾ ಪ್ರಶಸ್ತಿ.



## ಗುರುಬಸಪ್ಪ

S/o ದೇವಿಂದ್ರಪ್ಪ ವಿಶ್ವಕರ್ಮ,
ಸಾ। ಕೊನಾಳ, ತಾ। ಸುರಪುರ
ಜಿ। ಯಾದಗಿರಿ



**ಜನನ:** 15-01-1934

**ಶಿಕ್ಷಣ:** ನಾಲ್ಕನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಕಾಷ್ಠ

**ಗುರುಗಳು:** ಶ್ರೀ ದೇವೀಂದ್ರಪ್ಪ

**ಪ್ರಮುಖ ಪ್ರದರ್ಶನಗಳು:** ಕಲಬುರ್ಗಿ ಕಂಪು-2010, ಬೀದರ್ ಉತ್ಸವ, ಕಲಬುರ್ಗಿ ಉತ್ಸವ

**ಪ್ರಮುಖ ಕೃತಿಗಳು:** ಗುಂಗುರು ಸರಪಳಿ ಕುದುರೆಗಳು, ತಲಬಾಗಿಲು, ಪಡಸಾಲಿ, ಸಗರನಾಡ ಜಾನಪದ ಕಾಷ್ಠ ಶಿಲ್ಪಕಲೆ- ಕೋನಾಳ, ಚಿಕ್ಕನಹಳ್ಳಿ, ರಾಜಾಪೂರ, ಹೆಬ್ಬಾಳ, ವಜ್ಜಲ, ಹುಣಸಗಿ, ಕೊಡೆಕಲ್, ದೇವಾಪುರ



## ಗೈಬುಸಾಬ ಅಲ್ಲಿಸಾಬ ನದಾಫ

ಕೇರಾಫ್ ಅಲ್ಲಿಸಾಬ ಸೈ. ನದಾಫ,
ಶ್ರೀ ಸಿದ್ಧಾರೂಢ ಶಿಲ್ಪಕಲಾ ಕೇಂದ್ರ, ಬೀಳಗಿ ಕ್ರಾಸ್,
ಬೀಳಗಿ ತಾ. ಬಾಗಲಕೋಟೆ ಜಿಲ್ಲೆ – 587 116

ದೂರವಾಣಿ: 9632516597 / 8970057410



**ಜನನ:** 01–07–1990

**ಶಿಕ್ಷಣ:** ಬಿ.ವಿ.ಎ., ಸಾಂಪ್ರದಾಯಿಕ ಶಿಲ್ಪಕಲಾ ತರಬೇತಿ

**ಶಿಲ್ಪಕಲಾ ಮಾಧ್ಯಮ:** ಶಿಲೆ

**ಗುರುಗಳು:** ಶ್ರೀ ಜಿ.ಎಲ್. ಭಟ್

**ಪ್ರಮುಖ ಪ್ರದರ್ಶನಗಳು:** ವಾರ್ಷಿಕ ಕಲಾಪ್ರದರ್ಶನ–ಜೆ. ಎಸ್.ಎಸ್. ಹಾಲಭಾವಿ ಸ್ಕೂಲ್ ಆಫ್ ಆರ್ಟ್ಸ್–2008, 2009, ಸುತ್ತೂರು ಜಾತ್ರಾ ಮಹೋತ್ಸವ–2008,2009, ಧಾರವಾಡ ಉತ್ಸವ, ಶಿಲ್ಪಕಲಾ ಶಿಬಿರ, ಸಂಸ್ಕೃತಿ ಇಲಾಖೆ, ಧಾರವಾಡ–2008

ಪ್ರಮುಖ ಕೃತಿಗಳು: 5 ಅಡಿ ದ್ವಾರಪಾಲಕರು–ಅರಣ್ಯ ಸಿದ್ದೇಶ್ವರ ದೇವಾಲಯ, ಚಿಕ್ಕೋಡಿ; ಮಹಾದ್ವಾರ–ಸಿಂದಗಿ; ನಂದಿ ಹಾಗೂ ನಾಗರ ಶಿಲ್ಪಗಳು–ಬಾಗಲಕೋಟೆ; ಉಬ್ಬು ಶಿಲ್ಪಗಳು, ಆನೆ–ಹೂಬಳ್ಳಿ ಅಲಂಕಾರ ಶಿಲ್ಪಗಳು–ವಿಜಾಪುರ ಮತ್ತು ಅನೇಕ ದೇವಾಲಯಗಳು



## ಗೋಪಾಲ ವೀರಣ್ಣ ಸನಗುಂದಾ

ಕೇರಾಫ್ ಗುಂಡಪ್ಪ ಎಸ್. ಕಮ್ಮಾರ
ಪ್ಲಾಟ್‌ನಂ.166, ಖಾದ್ರಿ ಚೌಕ್
ಆಳಂದ ರೋಡ್, ಕಲಬುರಗಿ

ದೂರವಾಣಿ: 9945073852



**ಜನನ:** 31–07–1988

**ಶಿಕ್ಷಣ:** ಹತ್ತನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಶಿಲೆ, ಕಾಷ್ಠ

**ಗುರುಗಳು:** ಉಮೇಶ ಗುಡಿಗಾರ

**ಪ್ರಮುಖ ಪ್ರದರ್ಶನಗಳು:** ಕಲ್ಲು ಮತ್ತು ಮರದ ಕೆತ್ತನೆ, ಮಾದವರ–2010–11.

**ಪ್ರಮುಖ ಕೃತಿಗಳು:** ಗಣೇಶ–ಹೊಯ್ಸಳ, ಕೃಷ್ಣ–ಹೊಯ್ಸಳ, ಕೆಪಿಜೆ ಪ್ರಭು ಕರಕುಶಲ ತರಬೇತಿ ಕೇಂದ್ರ ಜೋಗುರ ದೊಡ್ಡಿ–ಬಿಡದಿ



## ಗೋರಖ್ ಮಧುಕರ್ ಭಾವಸಾರ್

ನಂ.127, 'ಸಿ' ಬ್ಲಾಕ್, ಗಣಪತಿ ದೇವಾಲಯದ ಹತ್ತಿರ
ಭಾವಸಾರ ನಗರ
ವಿಜಯಪುರ – 586 103

ದೂರವಾಣಿ: 94487 87700



**ಜನನ:** 5–4–1975

**ಶಿಕ್ಷಣ:** ಬಿ.ಎಫ್.ಎ.

**ಶಿಲ್ಪಕಲಾ ಮಾಧ್ಯಮ:** ಬಹುಮಾಧ್ಯಮ

**ಪ್ರಮುಖ ಪ್ರದರ್ಶನಗಳು:** ಬಜಾಜ್ ಆರ್ಟ್ ಗ್ಯಾಲರಿ, ಜಹಾಂಗೀರ್ ಆರ್ಟ್ ಗ್ಯಾಲರಿ, ಬಿಜಾಪುರ, ನೆಹರೂ ಆರ್ಟ್ ಗ್ಯಾಲರಿ– ಮುಂಬಯಿ, ಚಿತ್ರಕಲಾ ಪರಿಷತ್ತು– ಬೆಂಗಳೂರು.

**ಪ್ರಶಸ್ತಿ/ಬಹುಮಾನಗಳು:** ಮುಂಬಯಿಯ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್‌ನಿಂದ ಬಹುಮಾನ, ಮಹಾರಾಷ್ಟ್ರ ರಾಜ್ಯ ಕಲಾ ಸ್ಪರ್ಧೆಯಲ್ಲಿ ಬಹುಮಾನ, ನಾಸಿಕ್‌ನ ಶಿಲ್ಪಕಲಾ ಸ್ಪರ್ಧೆಯಲ್ಲಿ ಬಹುಮಾನ ಹಾಗೂ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ನಾಲ್ಕನೇ ವಾರ್ಷಿಕ ಶಿಲ್ಪಕಲಾ ಪ್ರದರ್ಶನದ ಬಹುಮಾನ.



## ಗೋವಿಂದಪ್ಪ

S/o ಭೀಮಣ್ಣ ಕುದುರಿಮನೆ,
ಸುರಪುರ ಪೋ., ತಾ। ಸುರಪುರ,
ಜಿ। ಯಾದಗಿರಿ

ದೂರವಾಣಿ: 9844713895



**ವಯಸ್ಸು:** 65 ವರ್ಷ

**ಶಿಕ್ಷಣ:** ಮೂರನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಕಾಷ್ಠ

**ಗುರುಗಳು:** ಶ್ರೀ ಭೀಮಣ್ಣ ಕುದುರಿಮನೆ

**ಪ್ರಮುಖ ಕೃತಿಗಳು:** ತಲಬಾಗಿಲು, ಕುದುರೆಗಳು, ಪಡಸಾಲಿ ಜೋಡಣೆ–ಕನ್ನೆಳ್ಳಿ, ಕೂಡಲಿ, ಬೈಚಬಾಳ, ಗೋನಾಲದೇವರ, ಸಿದ್ದಾಪುರ, ವಾಗಣಗೇರಿ, ತಳವಾರಗೇರಿ ಕುಂಬಾರಪೇಟೆ, ಮರಕಲ್, ಯಮನುರ



## ಗೌರಿಶಂಕರ್ ಬಿ.ಜಿ.

ನಂ.2/95, ಹನುಮಾನ್ ದೇವಸ್ಥಾನ ಹತ್ತಿರ,
ಜಗತ್, ಕಲಬುರಗಿ

ದೂರವಾಣಿ: 93429 82411



**ಜನನ:** 1982ರಲ್ಲಿ

**ಶಿಕ್ಷಣ:** ಡಿಪ್ಲೊಮೊ ಇನ್ ಆರ್ಟ್ಸ್ ಮಾಸ್ಟರ್

**ಶಿಲ್ಪಕಲಾ ಮಾಧ್ಯಮ:** ವಿವಿಧ ಮಾಧ್ಯಮಗಳು

**ಪ್ರಮುಖ ಕೃತಿಗಳು:** ಬಿಜಾಪುರದ ರಾಕ್ ಗಾರ್ಡನ್, ಬಾಗಲಕೋಟೆ ಮತ್ತು ಸಿಂಗಟಾಲೂರಿನ ಜಾನಪದ ಮ್ಯೂಸಿಯಂ, ಕಿನ್ನೇರಿಮಠದ ಗ್ರಾಮೀಣ ಜೀವನದ ಮ್ಯೂಸಿಯಂ ಇತ್ಯಾದಿ ಯೋಜನೆಗಳಲ್ಲಿ ಕೆಲಸ ಮಾಡಿದ್ದಾರೆ.

ರಾಷ್ಟ್ರ ಮತ್ತು ರಾಜ್ಯ ಮಟ್ಟದ ಅನೇಕ ಶಿಲ್ಪ ಕಾರ್ಯಗಾರಗಳಲ್ಲಿ ಭಾಗವಹಿಸಿದ್ದಾರೆ. ಇವರು ರಚಿಸಿರುವ ವಿವಿಧ ಮಾಧ್ಯಮಗಳ ಶಿಲ್ಪಗಳು ಜನಪ್ರಿಯವಾಗಿವೆ.



## ಚಂದ್ರಶೇಖರ ಮೇಲಪ್ಪ ಪತ್ತಾರ

ವಿಶ್ವಕರ್ಮ ಶಿಲ್ಪಕಲಾ ಕೇಂದ್ರ,
ಸಾ. ಸೀಮಿಕೇರಿ, ಹುಬ್ಬಳ್ಳಿ ರೋಡ್ ಬೈಪಾಸ್,
ಬಾಗಲಕೋಟೆ ಜಿಲ್ಲೆ – 587 102

ದೂರವಾಣಿ: 9945098673



**ಜನನ:** 01–06–1972

**ಶಿಕ್ಷಣ:** ಏಳನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಶಿಲೆ

**ಗುರುಗಳು:** ಶ್ರೀ ಮಹಾದೇವಪ್ಪ ರಾಮಪ್ಪ ಬಡಿಗೇರ ಹಾಗೂ ಸಹೋದರರು

**ಪ್ರಮುಖ ಕೃತಿಗಳು:** ಕಡೆಗೋಲು ಕೃಷ್ಣ–ಉಡುಪಿ, ಮಹಿಷಾಸುರಮರ್ದಿನಿ–ಆಂಧ್ರ, ಅಂಬಾಭವಾನಿ ಮತ್ತು ಸಿಂಹ, ಅಕ್ಕಮಹಾದೇವಿ–ಮಹಾರಾಷ್ಟ್ರ, ವಾಲ್ಮೀಕಿ–ಹುಮ್ನಾಬಾದ್, ಕಲ್ಯಾಣ ಬಸವಣ್ಣ, ಅಲ್ಲಮಪ್ರಭು–ಪಾಲಿಕೊಪ್ಪ, ಶಿವಭಕ್ತ ಕಣ್ಣಪ್ಪ–ಚಟ್ನಳ್ಳಿ, ರಾಘವೇಂದ್ರರ ಬೃಂದಾವನ, ಅಯ್ಯಪ್ಪಸ್ವಾಮಿ– ಹುಬ್ಬಳ್ಳಿ, ವಿಠ್ಠಲ, ರುಕ್ಮಿಣಿ–ರಬಕವಿ, ಗಣಪತಿ–ಸೀಮಿಕೇರಿ, ವೀರಯೋಧ–ನಾವಳಿಗಿ.

**ಪ್ರಶಸ್ತಿ/ಬಹುಮಾನಗಳು:** ಹೇಮ–ವೇಮ ಸಾಮಾಜಿಕ ಸಂಸ್ಥೆ (ರಿ) ಬಾದಾಮಿಯಿಂದ ಮಹಾಯೋಗಿ ಶ್ರೀ ವೇಮನ ಪ್ರಶಸ್ತಿ, ಶ್ರೀ ಉದಯ ಗಣೇಶ ಚಾರಿಟಬಲ್ ಟ್ರಸ್ಟ್‌ನಿಂದ ಲಾತೂರರ ನೆನಪಿನ ಕಾಣಿಕೆ, ಶ್ರೀ ನೀಲಾಂಬಿಕೆ ಮೂರ್ತಿ ಪ್ರತಿಷ್ಠಾಪನೆ ಮತ್ತು ಗ್ರಂಥ ಬಿಡುಗಡೆ ಸಮಾರಂಭದಲ್ಲಿ ನೆನಪಿನ ಕಾಣಿಕೆ, ಶ್ರೀ ಬಸವೇಶ್ವರ ದೇವಸ್ಥಾನ ಸಮಿತಿ ಸವಿನೆನಪು.



## ಚಂದ್ರು ಶಿವಲಿಂಗಪ್ಪ ದೇವರ

ರಾಮತೀರ್ಥ, ಭೀಮನಹಳ್ಳಿ ಪೋಸ್ಟ್
ಚಿತ್ತಾಪುರ ತಾ., ಗುಲ್ಬರ್ಗ ಜಿಲ್ಲೆ-585222
ದೂರವಾಣಿ: 97314 97578



**ಜನನ:** 09-08-1059

**ಶಿಕ್ಷಣ:** ಎಸ್.ಎಸ್.ಎಲ್.ಸಿ., ಸಾಂಪ್ರದಾಯಿಕ ಶಿಲ್ಪಕಲಾ ತರಬೇತಿ

**ಪ್ರಮುಖ ಕೃತಿಗಳು:** ನಂದಿ, ಭವಾನಿ, ಆಂಜನೇಯ, ಈಶ್ವರಲಿಂಗ, ನಾಗಮೂರ್ತಿ



## ಚಿದಾನಂದ ವಿ.ಕೆ.

ಶ್ರೀ ವಿಶ್ವರೂಪ ಶಿಲ್ಪ ಗುರುಕುಲ
ವೈಷ್ಣೋದೇವಿ ಕಾಲೋನಿ, ಈಶ್ವರನಗರ
ಎ.ಪಿ.ಎಂ.ಸಿ., ಹುಬ್ಬಳ್ಳಿ
ದೂರವಾಣಿ: 98807 39572



**ಜನನ:** 18-09-1982

**ಶಿಕ್ಷಣ:** ಬಿ.ವಿ.ಎ., ಬಿ.ಎಫ್.ಎ. (ಪ್ರತಿಮಾ ಶಿಲ್ಪ, ದೇವಾಲಯ ಶಿಲ್ಪ)

**ಶಿಲ್ಪಕಲಾ ಮಾಧ್ಯಮ:** ಶಿಲೆ, ಕಾಷ್ಠ, ಸಿಮೆಂಟ್

**ಗುರುಗಳು:** ಶ್ರೀ ಜಿ.ಬಿ. ಹಂಸಾನಂದಾಚಾರ್ಯ, ಶ್ರೀ ಗಂಗಾಧರ ಅಚಾರ್ಯ, ಡಾ. ಜಿ. ಜ್ಞಾನಾನಂದ

**ಪ್ರಶಸ್ತಿ/ಬಹುಮಾನಗಳು:** ತರ್ಲಘಟ್ಟದ ಹಿರೇಹರಕುಣಿ ಬಸವೇಶ್ವರ ಟ್ರಸ್ಟಿನಿಂದ 'ಯುವಶಿಲ್ಪಿ' ಪ್ರಶಸ್ತಿ, ಇಡಗುಂಜಿಯ ವಿಶ್ವಕರ್ಮ ಒಕ್ಕೂಟದಿಂದ 'ಯುವಶ್ರೇಷ್ಠ' ಪ್ರಶಸ್ತಿ, ಉಡುಪಿಯ ಕಾಳಿಕಾ ದೇವಸ್ಥಾನದಿಂದ 'ಕಾಳಿಕಾಶಿಲ್ಪ' ಪ್ರಶಸ್ತಿ.

ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.



## ಜಕಣಾಚಾರ್ಯ

ಯಲಗೋಡ ಗ್ರಾಮ ಮತ್ತು ಅಂಚೆ,
ಜೇವರ್ಗಿ ತಾಲ್ಲೂಕು, ಕಲಬುರಗಿ ಜಿಲ್ಲೆ

ದೂರವಾಣಿ: 96115 01129



**ಜನನ:** 1-4-1988

**ಶಿಕ್ಷಣ:** ಮರ ಕೆತ್ತನೆಯಲ್ಲಿ ಸರ್ಟಿಫಿಕೇಟ್ ಕೋರ್ಸ್

**ಶಿಲ್ಪಕಲಾ ಮಾಧ್ಯಮ:** ಕಾಷ್ಠ

**ಪ್ರಮುಖ ಕೃತಿಗಳು:** ಪಡಸಾಲೆಗಳು, ಪಲ್ಲಕ್ಕಿ, ತಲಬಾಗಿಲು, ರಥ ನಿರ್ಮಾಣ

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ 12ನೇ ವಾರ್ಷಿಕ ಶಿಲ್ಪಕಲಾ ಪ್ರದರ್ಶನದಲ್ಲಿ ಸಾಂಪ್ರದಾಯಿಕ ಪ್ರಕಾರದಲ್ಲಿ ಬಹುಮಾನ.



## ಜಗನ್ನಾಥ ಜಕ್ಕೆಪಲ್ಲಿ

ಚಿತ್ರಶಿಲ್ಪ, ಎಡಬ್ಲ್ಯುಎಸ್ – 18,
ಕೆಎಚ್‌ಬಿ ಕಾಲೋನಿ, ಬಿಡದಿ ಅಂಚೆ
ರಾಮನಗರ – 562 106

ಮೊ: 93413 93772



**ಜನನ:** 26-01-1968

**ಶಿಕ್ಷಣ:** ಎಂ.ಎ. (ಅಪ್ಲೈಡ್ ಆರ್ಟ್).

**ಪ್ರಮುಖ ಕೃತಿಗಳು:** ಕೃಷ್ಣಮೂರ್ತಿ, ಅಣ್ಣಾರಾವ್ ಪಾಟೀಲ, ಎಂ.ವಿ. ಜಯರಾಮ್, ಶೇಷಾದ್ರಿ ಅಯ್ಯರ್, ಅರಳಗುಪ್ಪೆ ಚಂದ್ರೇಗೌಡ, ಬಸವಣ್ಣ, ಕೆಂಪೇಗೌಡ, ಮುಂತಾದವರ ಭಾವಶಿಲ್ಪಗಳು ಕಂಚಿನಲ್ಲಿ.

**ಪ್ರದರ್ಶನಗಳು:** ಬೆಂಗಳೂರಿನ ಚಿತ್ರಕಲಾ ಪರಿಷತ್ತು, ಚೆನ್ನೈ ಕಲಬುರುಗಿ, ಮೈಸೂರು ದಸರಾ, ಲಕ್ಕುಂಡಿ ಉತ್ಸವ, ನಾಗಪುರ, ಮುಂಬಯಿ ಇತ್ಯಾದಿ

**ಪ್ರಶಸ್ತಿ/ಬಹುಮಾನಗಳು:** ಕಲಬುರ್ಗಿಯ ಪ್ರದರ್ಶನ ಕಲಾ ಕಾಲೇಜಿನಿಂದ ಪ್ರಶಸ್ತಿ, ಕಲಬುರುಗಿ, ಮೈಸೂರು ದಸರಾ, ನವದೆಹಲಿ ಮುಂತಾದೆಡೆ ಇವರ ಕೃತಿಗಳಿಗೆ ಪುರಸ್ಕಾರಗಳು.

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.



## ಜನಾರ್ಧನಮೂರ್ತಿ ಎನ್.ಎಸ್.

ನಂ.101, ಶ್ರೀ ನಿಲಯ
ಶಿಲ್ಪಿ ಶ್ರೀನಿವಾಸಾಚಾರ್ಯ ಬ್ಲಾಕ್
ಗಾಯಿತ್ರಿಪುರಂ, ಮೈಸೂರು

ದೂರವಾಣಿ: 8762718692



**ಜನನ:** 1949

**ಶಿಕ್ಷಣ:** ಕಂಚಿನ ಎರಕದ ಕಲಾ ತರಬೇತಿ

**ಶಿಲ್ಪಕಲಾ ಮಾಧ್ಯಮ:** ಲೋಹ

**ಪ್ರಮುಖ ಕೃತಿಗಳು:** ದಸರಾ ಮೆರವಣಿಗೆಯ ಚಿನ್ನದ ಅಂಬಾರಿಯಲ್ಲಿ ಚಾಮುಂಡೇಶ್ವರಿ ವಿಗ್ರಹ–ಮೈಸೂರು,

**ಪ್ರಶಸ್ತಿ / ಬಹುಮಾನಗಳು:** ದಸರಾ ವಸ್ತುಪ್ರದರ್ಶನ ಕಲಾವಿಭಾಗ ಪ್ರಶಸ್ತಿ (3 ಬಾರಿ) –ಮೈಸೂರು, ದಸರಾ ವಸ್ತುಪ್ರದರ್ಶನ ಜೀವಮಾನ ಸಾಧನೆ ಪ್ರಶಸ್ತಿ, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಶಿಲ್ಪಕಲಾ ಸಂಭ್ರಮ–20ರ ಅಭಿನಂದನಾ ಪುರಸ್ಕಾರ–2016.

ನಿವೃತ್ತ ಬೋಧಕರು– ಚಾಮರಾಜೇಂದ್ರ ತಾಂತ್ರಿಕ ತರಬೇತಿ ಕಾಲೇಜು, ಮೈಸೂರು.



## ಜಿತೇಂದ್ರಾಚಾರ್ಯ ಜಿ.ಬಿ.

ಓಂ ಶಕ್ತಿ ನಿಲಯ, 6ನೇ ವಾರ್ಡ್
ಇಟಗಿ, ಹೂವಿನಹಡಗಲಿ
ತಾ॥ ಬಳ್ಳಾರಿ ಜಿ

ಮೊ; 9901735487



**ಜನನ:** 1948
**ಶಿಲ್ಪಕಲಾ ಮಾಧ್ಯಮ:** ಶಿಲೆ, ಕಾಷ್ಟ, ಲೋಹ, ಮಣ್ಣು
**ಪ್ರಮುಖ ಕೃತಿಗಳು:** 25ಕ್ಕೂ ಹೆಚ್ಚು ಗಡ್ಡಿರಥಗಳು, ದೇವತೆಗಳ ವಿಗ್ರಹಗಳು, ತೇರಿನ ಗೊಂಬೆಗಳು, ದೇವಾಲಯಗಳಿಗೆ ಬೆಳ್ಳಿಯ ಕಲಾಕೃತಿಗಳು.
**ಪ್ರಶಸ್ತಿ / ಬಹುಮಾನಗಳು:** ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಶಿಲ್ಪಕಲಾ ಸಂಭ್ರಮ–20ರ ಅಭಿನಂದನಾ ಪುರಸ್ಕಾರ–2016.
ಕಲಾಶಿಬಿರಗಳಲ್ಲಿ ಮಾರ್ಗದರ್ಶಕರಾಗಿ ಸೇವೆ. ಮೂರ್ತಿಶಿಲ್ಪ, ವಾಸ್ತುಶಿಲ್ಪ, ಸಂಗೀತ ಉಪಕರಣಗಳ ವೃತ್ತಿ.



## ತೀರ್ಥಾಚಾರ್ ಟಿ.ಎಂ.

ಶ್ರೀ ಕಾಳಿಕಾಂಬ ಶಿಲ್ಪಕಲಾ ಮಂದಿರ
ತುಪ್ಪದಹಳ್ಳಿ, ಹೊಳಲ್ಕೆರೆ ತಾಲ್ಲೂಕು
ಚಿತ್ರದುರ್ಗ ಜಿಲ್ಲೆ – 577 539

ದೂರವಾಣಿ: 99023 58644



**ಜನನ:** 10–08–1939

**ಶಿಕ್ಷಣ:** ಲೋಯರ್ ಸೆಕೆಂಡರಿ (1954)

**ಪ್ರಮುಖ ಕೃತಿಗಳು:** ಹೊಳಲ್ಕರೆ, ಕಡೂರು, ಹೊಸದುರ್ಗ, ಚಿಕ್ಕನಾಯಕನಹಳ್ಳಿ, ಚಳ್ಳಕೆರೆ ಮತ್ತು ಚನ್ನಗಿರಿ, ಹೊಳೆನರಸೀಪುರ, ಹೊಳಲ್ಕೆರೆ, ತರೀಕೆರೆ ತಾಲ್ಲೂಕುಗಳಲ್ಲಿ 25ಕ್ಕೂ ಹೆಚ್ಚು ವಿವಿಧ ದೇವರ ರಥಗಳ ನಿರ್ಮಾಣ. ಲಕ್ಷ್ಮೀ ನರಸಿಂಹಸ್ವಾಮಿ, ಉಗ್ರ ನರಸಿಂಹ, ಪಾರ್ವತಿ, ಪರಮೇಶ್ವರ, ವೀರಭದ್ರ, ಈಶ್ವರ, ದಕ್ಷಿಣಾಮೂರ್ತಿ, ಬಾಲಸುಬ್ರಹ್ಮಣ್ಯ, ಆಂಜನೇಯ, ನವಗ್ರಹ, ನಾಗರಕಲ್ಲು, ಗಣಪತಿ, ಬುದ್ಧ, ಬಸವಣ್ಣ ಸೇರಿದಂತೆ 6 ಇಂಚಿನಿಂದ ಹಿಡಿದು 5 ಅಡಿಗಳ ತನಕ 225ಕ್ಕೂ ಹೆಚ್ಚು ವಿಗ್ರಹಮೂರ್ತಿಗಳನ್ನು ರಾಜ್ಯದ ನಾನಾ ಭಾಗಗಳಲ್ಲಿ ನಿರ್ಮಿಸಿಕೊಟ್ಟಿದ್ದಾರೆ. ಕುದುರೆ, ಜಯ–ವಿಜಯಮೂರ್ತಿ, ಭೂತರಾಯ, ಕೆಂಚರಾಯ ಇತ್ಯಾದಿ ಮರದ ವಿಗ್ರಹಗಳನ್ನೂ ನಿರ್ಮಿಸಿದ್ದಾರೆ.

**ಪ್ರಶಸ್ತಿ / ಬಹುಮಾನಗಳು:** ಇವರ ಕಲೆಗೆ ಸುವರ್ಣ ಸ್ವಾತಂತ್ರ್ಯೋತ್ಸವ ಪ್ರಶಸ್ತಿ, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ 2011 ಗೌರವ ಪ್ರಶಸ್ತಿ ದೊರೆತಿದೆ. ನಾಡಿನ ವಿವಿಧ ಸಂಘಟನೆಗಳಿಂದ ಗೌರವ ಸನ್ಮಾನಗಳು ದೊರೆತಿವೆ.

ಶಿಲ್ಪಕಲಾ ಅಕಾಡೆಮಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.



## ದೇವರಾಜ ಆಚಾರ್ ಶಿಲ್ಪಿ

ಶ್ರೀ ಗಾಯತ್ರಿ ಶಿಲ್ಪಕಲಾ ಕೇಂದ್ರ
ಸಂಗಾಪುರ, ಮಾನ್ವಿ, ಕರಡಿಗುಡ್ಡ
ರಾಯಚೂರು–584123

ದೂರವಾಣಿ: 9632929147



**ಜನನ:** 01–06–1991

**ಶಿಕ್ಷಣ:** ಎಸ್.ಎಸ್.ಎಲ್.ಸಿ.

**ಶಿಲ್ಪಕಲಾ ಮಾಧ್ಯಮ:** ಶಿಲೆ, ಸಿಮೆಂಟ್

**ಪ್ರಮುಖ ಪ್ರದರ್ಶನಗಳು:** ವೀರಮಾನ್ವಿ ರಾಯಚೂರು, ಸಿಂಧನೂರು ಮಾನ್ವಿ

**ಪ್ರಮುಖ ಕೃತಿಗಳು:** ಸಾಬೂನಿನಲ್ಲಿ ಕಲಾಕೃತಿಗಳು, ಶಿಲೆ ಹಾಗೂ ಥರ್ಮಾಕೋಲ್‌ನಿಂದ ಮನೆ ನಿರ್ಮಾಣ, ಪ್ಲೈವುಡ್‌ನಿಂದ ತಾಜಮಹಲ್ ನಿರ್ಮಾಣ, ಶ್ರೀಕೃಷ್ಣಮೂರ್ತಿ–ದೇವದುರ್ಗ, ಗ್ಲುಕೋಸ್ ಬಾಟಲ್ ಒಳಗೆ ಮಂಚ



## ದೇವಿಪ್ರಸಾದ ಮಲ್ಲೋಜ್ ಮಯಾಚಾರ್ಯ

ಶ್ರೀ ಸಿದ್ದಲಿಂಗೇಶ್ವರ ಶಿಲ್ಪಕಲಾ ಕೇಂದ್ರ,
21ನೇ ರಸ್ತೆ, ಪ್ಲಾಟ್ ನಂ. 131/2ಎ, ವಿಜಯನಗರ,
ವಿದ್ಯಾಗಿರಿ, ಬಾಗಲಕೋಟೆ – 587 102

ದೂರವಾಣಿ: 9880172297



**ಜನನ:** 01–08–1976

**ಶಿಕ್ಷಣ:** ಬಿ.ಎಫ್.ಎ.

**ಶಿಲ್ಪಕಲಾ ಮಾಧ್ಯಮ:** ಶಿಲೆ

**ಗುರುಗಳು:** 'ಜಕಣಾಚಾರಿ' ಪ್ರಶಸ್ತಿ ವಿಜೇತ ಶಿಲ್ಪಿ ಮಲ್ಲೋಜ್ ಭೀ. ಮಯಾಚಾರ್ಯ

**ಪ್ರಮುಖ ಪ್ರದರ್ಶನಗಳು:** ಕರ್ನಾಟಕ ಲಲಿತಕಲಾ ಮೇಳ, ಬೆಂಗಳೂರು–2002, ಸುವರ್ಣ ಕರ್ನಾಟಕ ಕಲಾಮೇಳ, ಬೆಂಗಳೂರು–2007, ಅಕ್ಕ ವಿಶ್ವ ಸಾಹಿತ್ಯ ಸಮ್ಮೇಳನ, ಬೆಳಗಾವಿ–2011, ತಾಲಮಾನ ಬೋಧನೆ ಮತ್ತು ತೈಲವರ್ಣ ಶಿಬಿರ, ಬೆಂಗಳೂರು–2010 ಮತ್ತು 2011

**ಪ್ರಮುಖ ಕೃತಿಗಳು:** ಶ್ರೀ ಸಿದ್ಧಾರೂಢ ಪ್ರತಿಮೆ– ಗುಲ್ಬರ್ಗಾ, ಬಸವೇಶ್ವರ ಅಶ್ವಾರೂಢ ಪ್ರತಿಮೆ– ಶಿರವಾರ, ಬಸವಣ್ಣನವರ ಪ್ರತಿಮೆ (ಮಾರ್ಬಲ್)– ಲಿಂಗಸೂರ, ಡಾ. ಅಂಬೇಡ್ಕರ್ ಪ್ರತಿಮೆ– ಮಾಡಬಾಳ (ಸಿಂದಗಿ), ಅಂಬಾಭವಾನಿ–ಹುಬ್ಬಳ್ಳಿ, ಶ್ರೀ ಸತ್ಯಸಾಯಿಬಾಬಾ (ಮಾರ್ಬಲ್) –ಗುಳೇದಗುಡ್ಡ

**ಪ್ರಶಸ್ತಿ/ಬಹುಮಾನಗಳು:** 68ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಚಿತ್ರಕಲೆಗೆ ಪ್ರಥಮ ಬಹುಮಾನ–2000



## ದೇವಿಪ್ರಿಯಾ ವಿಮಲನಾಥನ್

ನಂ. 33/1–ಜಿ, 2ನೇ ಅಡ್ಡರಸ್ತೆ
2ನೇ ಮುಖ್ಯರಸ್ತೆ, ಹುಳಿಮಾವು ಬಡಾವಣೆ
ಬನ್ನೇರುಘಟ್ಟ ರಸ್ತೆ
ಬೆಂಗಳೂರು–560076

ದೂರವಾಣಿ: 98448 27276



**ಜನನ:** 14–07–1982

**ಶಿಕ್ಷಣ:** ಬಿ.ಎಫ್.ಎ. (ಪೈಂಟಿಂಗ್), ಎಂ.ವಿ.ಎ. (ಕಲಾ ಇತಿಹಾಸ), ಎಂ.ಎಫ್.ಎ. (ಪೈಂಟಿಂಗ್)

**ಶಿಲ್ಪಕಲಾ ಮಾಧ್ಯಮ:** ಮೇಣ, ಪಿ.ಓ.ಪಿ. ಮುಂತಾದವು

**ಪ್ರಮುಖ ಪ್ರದರ್ಶನಗಳು:** ಬೆಂಗಾಲ್ ಅಂಡ್ ಬೆಂಗಳೂರು, ಚಿತ್ರಕಲಾ ಪರಿಷತ್–2016; ಯು.ಬಿ. ಸಿಟಿ ಬೆಂಗಳೂರು ಆರ್ಟ್ ಫೆಸ್ಟಿವಲ್–2014; ಚೆನ್ನೈ ಆರ್ಟ್ ಫೆಸ್ಟಿವಲ್–201; 'ಎ ಫ್ಯಾಮಿಲಿ ರೆಂಡರಿಂಗ್' ಚಿತ್ರಕಲಾ ಪರಿಷತ್ (ಕಂಚಿನ ಕೃತಿಗಳು)–2012; ನಂಜುಂಡ ಸಿರಿ–ವಾರ್ಷಿಕ ಕಲಾ ಪ್ರದರ್ಶನ, ಬೆಂಗಳೂರು–2003;

**ಪ್ರಶಸ್ತಿ / ಬಹುಮಾನಗಳು:** ರಾಜ್ಯ ಮಟ್ಟದಲ್ಲಿ ಅತ್ಯುತ್ತಮ ವರ್ಣಚಿತ್ರ ಬಹುಮಾನ, ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ 10ನೇ ವಾರ್ಷಿಕ ಶಿಲ್ಪಕಲಾ ಪ್ರದರ್ಶನದ ಬಹುಮಾನ ಪುರಸ್ಕೃತರು.

ಕಲಾ ಶಿಬಿರಗಳಲ್ಲಿ ಭಾಗವಹಿಸಿದ ಅನುಭವ; ಟೆರ್ರಾಕೋಟ, ಮ್ಯೂರಲ್, ಚಿತ್ರಕಲೆಗಳಲ್ಲಿ ಅನುಭವ; ಎನ್.ಎ.ಎಫ್.ಎಲ್.ನಲ್ಲಿ ಕಲೆ ಮತ್ತು ವಿನ್ಯಾಸ ಕುರಿತು ಬೋಧನಾ ಅನುಭವ; ಭಾರತೀಯ ಮತ್ತು ಪಾಶ್ಚಿಮಾತ್ಯ ಕಲಾ ಇತಿಹಾಸ ಬೋಧನೆ.



## ದೇವೀಂದ್ರಪ್ಪ ಮಾನಪ್ಪ ವಿಶ್ವಕರ್ಮ

ಮಾನಪ್ಪ ವಿಶ್ವಕರ್ಮ,
ಪೋ। ಕಳ್ಳಿಲಿಂಗಸೂಗೂರು,
ತಾ। ಲಿಂಗಸೂಗೂರ, ಜಿ। ರಾಯಚೂರು.

ದೂರವಾಣಿ: 9480306659



**ವಯಸ್ಸು:** 53 ವರ್ಷ

**ಶಿಕ್ಷಣ:** ಆರನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಜಾನಪದ ಕಾಷ್ಠ ಶಿಲ್ಪ

**ಗುರುಗಳು:** ಶ್ರೀ ಮಾನಪ್ಪ ವಿಶ್ವಕರ್ಮ

**ಪ್ರಮುಖ ಕೃತಿಗಳು:** ಗ್ರಾಮದೇವತೆಗಳು, ದ್ಯಾವಮ್ಮ -ಗುಡಿಹಾಳ, ತೆರೆಬಾವಿ-ಬುದ್ದಿನ್ನಿ ದುರ್ಗಾದೇವಿ, ದ್ಯಾವಮ್ಮ- ಬನ್ನಿಗೊಳ, ದುರ್ಗಮ್ಮ-ಬೂಪೂರ ತಾಂಡ, ದುರ್ಗಮ್ಮ-ಕಳಲಿಂಗಸೂಗೂರ, ದ್ಯಾವಮ್ಮ-ತಾರಿವಾಳ



## ದ್ಯಾಮಣ್ಣ ಕಾಳಪ್ಪ ಬಡಿಗೇರ

ಮು.ಪೋ. ಅನಗವಾಡಿ,
ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ – 587 116

ದೂರವಾಣಿ: 99024 02834



**ಜನನ:** 29-12-1959

**ಶಿಕ್ಷಣ:** ಐದನೇ ತರಗತಿ

**ಶಿಲ್ಪಕಲಾ ಮಾಧ್ಯಮ:** ಕಾಷ್ಠ

**ಗುರುಗಳು:** ಶ್ರೀ ನಿರುಪಾದಪ್ಪ ಬಡಿಗೇರ

**ಪ್ರಮುಖ ಪ್ರದರ್ಶನಗಳು:** ರಾಜ್ಯಮಟ್ಟದ ಕಲಾಪ್ರದರ್ಶನ-ಬೀಳಗಿ, 42ನೇ ಅಖಿಲ ಭಾರತ ಕರಕುಶಲ ಸಪ್ತಾಹ-ಬಿಜಾಪುರ, ಪಟ್ಟದಕಲ್ಲು ರಾಷ್ಟ್ರೀಯ ಉತ್ಸವ-2000, ಅಖಿಲ ಭಾರತ 68ನೇ ಕನ್ನಡ ಸಾಹಿತ್ಯ ಸಮ್ಮೇಳನ ಬಾಗಲಕೋಟೆ-2000

**ಪ್ರಮುಖ ಕೃತಿಗಳು:** (1)ಸಿಂಹಾಸನ ರಚನೆ(6 1/2 ಅಡಿ): ಅನಗವಾಡಿ, ಮಂಟೂರ, ಯರಝುರಿ

**(2) ಗ್ರಾಮದೇವತೆ ವಿಗ್ರಹಗಳು:** ಕಿಲ್ಲತೊರಗಲ್ಲ (6 ಅಡಿ 1 ಅಂಗುಲ), ಹುಲಕುಂದ (6 ಅಡಿ), ಮುಳ್ಳೂರು (5 1/2 ಅಡಿ), ಬೆಳ್ಳೆರಿ (6 ಅಡಿ 3 ಅಂಗುಲ)

